# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– I | ಬೆಂಗಳೂರು, ಮಂಗಳವಾರ, ಜನವರಿ ೦೬, ೨೦೧೫ (ಪುಷ್ಯ ೧೬, ಶಕ ವರ್ಷ ೧೯೩೬) | ನಂ. ೧೯ |
|---|---|---|
| Part– I | Bengaluru, Tuesday, January 06, 2015 (Pushya 16, Shaka Varsha 1936) | No. 19 |


### ಸಾರಿಗೆ ಸಚಿವಾಲಯ

**ವಿಷಯ:** ಒಂದಕ್ಕಿಂತ ಹೆಚ್ಚು ಪ್ರಾದೇಶಿಕ ಸಾರಿಗೆ ಕಛೇರಿಗಳಿರುವ ಜಿಲ್ಲೆಗಳಲ್ಲಿ ವಾಹನ ನೋಂದಣಿ, ಕಲಿಕೆ ಮತ್ತು ಚಾಲನಾ ಅನುಜ್ಞಾ ಪತ್ರವನ್ನು ಜಿಲ್ಲೆಯ ಯಾವುದೇ ಕಛೇರಿಯಲ್ಲಿ ಆನ್‌ಲೈನ್ ಮೂಲಕ ಪಡೆಯುವುದಕ್ಕೆ ಅವಕಾಶ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ: ಸಾರಿಇ 113 ಸಾಇಪ 2013, ದಿ: 29–09–2013.

2. ಸಾರಿಗೆ ಆಯುಕ್ತರು ಏಕಕಡತದಲ್ಲಿ ಸಲ್ಲಿಸಿರುವ ಪ್ರಸ್ತಾವನೆ ಸಂ: ಸಾಆ/ಸಿಬ್ಬಂದಿ–01/ವೈವ–08/2014–15.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪ್ರತಿಯೊಂದು ಪ್ರಾದೇಶಿಕ ಸಾರಿಗೆ ಅಧಿಕಾರಿ / ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳ (ಪ್ರಾ.ಸಾ.ಅ., ಆಟೋರಿಕ್ಷಾ ರಹದಾರಿ ಮತ್ತು ರಾಜ್ಯ ಸಾರಿಗೆ ನಿಗಮಗಳು ಹೊರತುಪಡಿಸಿ) ಕಾರ್ಯವ್ಯಾಪ್ತಿಯನ್ನು ಮೋಟಾರು ವಾಹನಗಳ ಕಾಯ್ದೆ, 1988 ರ ಸೆಕ್ಷನ್ 8, 9, 40, 41, 44, 45, 51 ಮತ್ತು 56 ರಡಿಯಲ್ಲಿ ಕೈಗೊಳ್ಳಲಾಗುವ ಪ್ರಕಾರ್ಯಗಳಿಗಾಗಿ ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಯಾದ್ಯಂತ ವಿಸ್ತರಿಸಿ ಆದೇಶಿಸಲಾಗಿದೆ.

ಮಾನ್ಯ ಮುಖ್ಯಮಂತ್ರಿಯವರು ತಮ್ಮ 2014–15ನೇ ಸಾಲಿನ ಆಯ–ವ್ಯಯ ಭಾಷಣದಲ್ಲಿ ಒಂದಕ್ಕಿಂತ ಹೆಚ್ಚು ಪ್ರಾದೇಶಿಕ ಸಾರಿಗೆ ಕಛೇರಿಗಳಿರುವ ಜಿಲ್ಲೆಗಳಲ್ಲಿ ಸಾರ್ವಜನಿಕರಿಗೆ ಅನುಕೂಲವಾಗುವಂತೆ ವಾಹನಗಳ ನೋಂದಣಿ, ಕಲಿಕೆ ಮತ್ತು ಚಾಲನಾ ಅನುಜ್ಞಾ ಪತ್ರಗಳನ್ನು ಯಾವುದೇ ಕಛೇರಿಗಳಲ್ಲಿ ಅರ್ಜಿ ಸ್ವೀಕರಿಸಿ ಕಾರ್ಯನಿರ್ವಹಿಸಲು ಮತ್ತು ಈ ಎಲ್ಲಾ ಸೇವೆಗಳನ್ನು ಆನ್‌ಲೈನ್ ಮುಖಾಂತರ ನೀಡಲು ಉದ್ದೇಶಿಸಿದೆ ಎಂದು ಘೋಷಣೆ ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸಾರಿಗೆ ಆಯುಕ್ತರ ಪ್ರಸ್ತಾವನೆಯಲ್ಲಿ ರಾಜ್ಯದಲ್ಲಿ ಒಂದಕ್ಕಿಂತ ಹೆಚ್ಚು ಪ್ರಾದೇಶಿಕ / ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಗಳಿರುವ ಕೆಳಕಂಡ ಜಿಲ್ಲೆಗಳನ್ನು ಮಾನ್ಯ ಮುಖ್ಯಮಂತ್ರಿಯವರ ಘೋಷಣೆಯಂತೆ ಆನ್‌ಲೈನ್ ಸೇವೆಗಳನ್ನು ನೀಡಲು ಗುರುತಿಸಲಾಗಿದ್ದು, ಈ ಬಗ್ಗೆ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

(1) ಮೈಸೂರು (2) ಕೋಲಾರ (3) ತುಮಕೂರು (4) ಮಂಡ್ಯ (5) ಹಾಸನ (6) ಶಿವಮೊಗ್ಗ (7) ಮಂಗಳೂರು (8) ಬೆಳಗಾವಿ (9) ಬಾಗಲಕೋಟೆ (10) ಕಾರವಾರ (11) ಬಳ್ಳಾರಿ (12) ಬೀದರ್ (13) ಚಿಕ್ಕಮಗಳೂರು (14) ಧಾರವಾಡ

ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಾರಿಇ 113 ಸಾಇಪ 2013, ಬೆಂಗಳೂರು, ದಿನಾಂಕ: 05–01–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಒಂದಕ್ಕಿಂತ ಹೆಚ್ಚು ಪ್ರಾದೇಶಿಕ ಸಾರಿಗೆ ಕಛೇರಿಗಳಿರುವ ಈ ಕೆಳಕಂಡ ಜಿಲ್ಲೆಗಳಲ್ಲಿ ಸಾರ್ವಜನಿಕರಿಗೆ ಅನುಕೂಲವಾಗುವಂತೆ ವಾಹನಗಳ ನೋಂದಣಿ, ಕಲಿಕೆ ಮತ್ತು ಚಾಲನಾ ಅನುಜ್ಞಾ ಪತ್ರಗಳನ್ನು ಜಿಲ್ಲೆಗಳ ಯಾವುದೇ ಕಛೇರಿಗಳಲ್ಲಿ ಅರ್ಜಿ ಸ್ವೀಕರಿಸಿ, ಕಾರ್ಯನಿರ್ವಹಿಸಲು ಮತ್ತು ಮೇಲೆ ನಮೂದಿಸಿದ ಸೇವೆಗಳನ್ನು ಆನ್‌ಲೈನ್ ಮೂಲಕ ಒದಗಿಸಲು ಸಾಧ್ಯವಾಗುವಂತೆ ಕೆಳಕಂಡ ಪ್ರತಿಯೊಂದು ಜಿಲ್ಲೆಯಲ್ಲಿನ ಪ್ರಾದೇಶಿಕ ಸಾರಿಗೆ ಅಧಿಕಾರಿ / ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳ ಕಾರ್ಯವ್ಯಾಪ್ತಿಯನ್ನು ಮೋಟಾರು ವಾಹನಗಳ ಕಾಯ್ದೆ 1988 ರ ಸೆಕ್ಷನ್ 8, 9, 40, 41, 44, 45, 51 ಮತ್ತು 56 ರಡಿಯಲ್ಲಿ ಕೈಗೊಳ್ಳಲಾಗುವ ಪ್ರಕಾರ್ಯಗಳಿಗಾಗಿ ಸದರಿ ಜಿಲ್ಲೆಯಾದ್ಯಂತ ವಿಸ್ತರಿಸಿ ಆದೇಶಿಸಿದೆ.

(1) ಮೈಸೂರು (2) ಕೋಲಾರ (3) ತುಮಕೂರು (4) ಮಂಡ್ಯ (5) ಹಾಸನ (6) ಶಿವಮೊಗ್ಗ (7) ಮಂಗಳೂರು (8) ಬೆಳಗಾವಿ (9) ಬಾಗಲಕೋಟೆ (10) ಕಾರವಾರ (11) ಬಳ್ಳಾರಿ (12) ಬೀದರ್ (13) ಚಿಕ್ಕಮಗಳೂರು (14) ಧಾರವಾಡ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೀರೇಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಾರಿಗೆ ಇಲಾಖೆ.

# ವಿಶೇಷ ರಾಜ್ಯ ಪತ್ರಿಕೆ

| ಭಾಗ– I | ಬೆಂಗಳೂರು, ಶುಕ್ರವಾರ, ಜನವರಿ ೯, ೨೦೧೫ (ಪುಷ್ಯ ೧೯, ಶಕ ವರ್ಷ ೧೯೩೬) | ನಂ. ೨೯ |
|---|---|---|
| Part– I | Bangalore, Friday, January 9, 2015 (Pushya 19, Shaka Varsha 1936) | No. 29 |

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಸಿಆಸುಇ 126 ಇಆಇ 2014, ಬೆಂಗಳೂರು, ದಿನಾಂಕ: 09ನೇ ಜನವರಿ 2015**

**ವಿಷಯ:** ಮಾನವ ಸಂಪನ್ಮೂಲ ಯೋಜನೆಯಡಿ ಒದಗಿಸಲಾದ ವಿದ್ಯುನ್ಮಾನ ವೇದಿಕೆಯನ್ನು ಬಳಸಿಕೊಂಡು ವಿವಿಧ ಇಲಾಖೆಗಳ ಬಟವಾಡೆ ಅಧಿಕಾರಿಯವರು ವೇತನ ಮತ್ತು ಭತ್ಯೆಗಳನ್ನು ಹೆಚ್ಚಾಗಿ ಸೆಳೆದಿರುವ (excess drawal of pay and allowances) ಬಗ್ಗೆ ಮಹಾಲೇಖಪಾಲರ ಆಡಿಟ್ ಆಕ್ಷೇಪಣೆ ಕುರಿತು.

**ಉಲ್ಲೇಖ:** 1. ದಿನಾಂಕ: 11.04.2014ರ ಸರ್ಕಾರಿ ಆದೇಶ ಸಂ: ಸಿಆಸುಇ 27 ಇಆಇ 2014.

2. ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ, ಇವರ, ಎಲ್ಲಾ ಇಲಾಖಾ ಮುಖ್ಯಸ್ಥರಿಗೆ ಉದ್ದೇಶಿಸಿದ ದಿನಾಂಕ: 25.09.2013ರ, 14.11.2013ರ ಹಾಗೂ 10.09.2014ರ ಪತ್ರಗಳ ಸಂ: ಸಿಇಜಿ 18 ಹೆಚ್‌ಆರ್‌ಎಮ್‌ಎಸ್ 2013.

3. ದಿನಾಂಕ: 03.09.2014ರ ಸರ್ಕಾರಿ ಆದೇಶ ಸಂ: ಸಿಆಸುಇ 21 ಇಆಇ 2014.

* * * * * *

ಮೇಲೆ (1)ರಲ್ಲಿ ಉಲ್ಲೇಖಿಸಿದ ದಿನಾಂಕ: 11.04.2014ರ ಆದೇಶದ ಕಡೆ ಗಮನ ಸೆಳೆದಿದೆ. ಮಾನವ ಸಂಪನ್ಮೂಲ ಯೋಜನೆಯಡಿ ಒದಗಿಸಲಾದ ವಿದ್ಯುನ್ಮಾನ ವೇದಿಕೆಯ ಬಳಕೆಗೆ ಸಂಬಂಧಿಸಿದಂತೆ (1) ಇ–ಆಡಳಿತ ಕೇಂದ್ರ (2) ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಗಳು (ಡಿಡಿಒಗಳು) (3) ನಾಮ ನಿರ್ದೇಶಿತ ರಾಜ್ಯ ಸಂಪರ್ಕಾಧಿಕಾರಿಗಳು ಮತ್ತು (4) ಇಲಾಖಾ ಮುಖ್ಯಸ್ಥರು, ಇವರುಗಳ ಪಾತ್ರ ಮತ್ತು ಜವಾಬ್ದಾರಿಗಳನ್ನು ಆ ಆದೇಶದಲ್ಲಿ ನಮೂದಿಸಲಾಗಿದೆ. ಅದರಲ್ಲಿ ವಿವರಿಸಿದಂತೆ ಇ–ಆಡಳಿತ ಕೇಂದ್ರವು ಹೆಚ್.ಆರ್.ಎಮ್.ಎಸ್ ತಂತ್ರಾಂಶ ಸೇವೆ ಒದಗಿಸುವ (Soft-ware Service Provider) ಕೇಂದ್ರವಾಗಿದೆ. ಈ ಕೇಂದ್ರವು ಯಾವುದೇ ಡಿಡಿಒ ಅಥವಾ ನೌಕರರೊಂದಿಗೆ ನೇರ ಪತ್ರ ವ್ಯವಹಾರ ನಡೆಸುವುದಿಲ್ಲ. ಇ–ಆಡಳಿತ ಕೇಂದ್ರ ಯಾವುದೇ ಮೂಲ ದಾಖಲಾತಿಗಳನ್ನು ಹೊಂದಿಲ್ಲ. ಈ ಕೇಂದ್ರವು ಡಿಡಿಒಗಳು/ಇಲಾಖಾ ಮುಖ್ಯಸ್ಥರು ದಾಖಲಿಸುವ ಸೇವಾ ಮತ್ತು ಸಂಬಳ ಸಂಬಂಧಿತ ಸೂಕ್ತ ದತ್ತಾಂಶವನ್ನು ಅಳವಡಿಸಲು ವಿದ್ಯುನ್ಮಾನ ತಂತ್ರಾಂಶ ಸಾಧನ ವ್ಯವಸ್ಥೆಯನ್ನು ಒದಗಿಸುವ ಸಂಸ್ಥೆಯಾಗಿದೆ. ವೇತನ ನಿಗದಿ, ರಜೆ, ವರ್ಗಾವಣೆ, ಪದೋನ್ನತಿ, ಸೇವೆಯಿಂದ ನಿರ್ಗಮನ, ಶಿಸ್ತು ವಿಚಾರ ಇತ್ಯಾದಿಗಳ ಮೂಲ ದಾಖಲಾತಿ ಮತ್ತು ಆದೇಶಗಳು, ಅವುಗಳನ್ನು ನಿರ್ವಹಿಸುವ ಕಛೇರಿ/ಇಲಾಖೆಯ ಸುಪರ್ದಿಯಲ್ಲಿರುತ್ತದೆ. ಡಿಡಿಒಗಳು ದಾಖಲಿಸಿರುವ/ಅಳವಡಿಸುವ ದತ್ತಾಂಶಗಳನ್ನು ಮಾತ್ರ ಹೆಚ್.ಆರ್.ಎಮ್.ಎಸ್ ನಿರ್ವಹಿಸುತ್ತದೆ.

ಆದ್ದರಿಂದ ಡಿಡಿಒಗಳು ಮತ್ತು ನಾಮ ನಿರ್ದೇಶಿತ ಸಂಪರ್ಕಾಧಿಕಾರಿಗಳು ಸರ್ಕಾರಿ ನೌಕರರ ಸೂಕ್ತ ದತ್ತಾಂಶವನ್ನು ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ದಾಖಲಿಸುವಾಗ ವಿಶೇಷ ಗಮನವನ್ನು ನೀಡಬೇಕು. ಹೀಗೆ ಕ್ರಮವಹಿಸಲು ತಪ್ಪಿದ್ದಲ್ಲಿ ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ತಪ್ಪಾದ ವರದಿಗಳು ಉತ್ಪಾದನೆಯಾಗಿ ದೋಷಪೂರಿತ ಫಲಿತಾಂಶ ದೊರೆಯುತ್ತದೆ. ಆದ್ದರಿಂದ ಹೆಚ್.ಆರ್.ಎಮ್.ಎಸ್ ವೇದಿಕೆಯನ್ನು ಉಪಯೋಗಿಸಿಕೊಂಡು ಸರಿಯಾದ ಮತ್ತು ಎಲ್ಲಾ ವಿಧದಲ್ಲಿ ಕರಾರುವಕ್ಕಾದ ಬಿಲ್ಲುಗಳ ತಯಾರಿಕೆಯನ್ನು ಖಚಿತ ಪಡಿಸಿಕೊಳ್ಳುವುದು ಡಿಡಿಒಗಳ ಜವಾಬ್ದಾರಿಯಾಗಿದೆ. ಸರಿಯಾಗಿಲ್ಲದ ರೀತಿ ಕಾಣಬರುವ, ಕಾರಣವಿಲ್ಲದ ಮತ್ತು ಅಸಹಜ ಅಂಕಿ ಬಿಲ್ಲುಗಳ ಬಗ್ಗೆ ಅವರು ಪರೀಕ್ಷಿಸಬೇಕು. ಉದಾಹರಣೆಗೆ, ನಿಗದಿಗಿಂತ ಹೆಚ್ಚು ಅಥವಾ ಕಡಿಮೆ ಕಂಡು ಬರುವ ವೇತನ/ ದಿನಾಂಕ/ ವರ್ಷದಂತಹ ಅಸ್ವಾಭಾವಿಕ ಬದಲಾವಣೆಗಳು ಕಂಡು ಬಂದಲ್ಲಿ ಡಿಡಿಒಗಳು ಅಂತಹ ಬಿಲ್ಲುಗಳನ್ನು ಎಚ್ಚರಿಕೆಯಿಂದ ತುಲನೆ ಮಾಡಿ, ಶೇ. 100ರಷ್ಟು ದತ್ತಾಂಶವನ್ನು ಖಚಿತಪಡಿಸಿಕೊಂಡು, ತಪ್ಪುಗಳನ್ನು ಸರಿಪಡಿಸುವ ಮೂಲಕ ಸರಿಯಾದ ದತ್ತಾಂಶವನ್ನು ದಾಖಲಿಸಬೇಕು.

2. ಈ ಸಂಬಂಧದಲ್ಲಿ ಮಹಾಲೇಖಪಾಲರ ಆಡಿಟ್ ತಪಾಸಣೆಯಿಂದ ಕಂಡು ಬಂದಿರುವ ವಿವಿಧ ಇಲಾಖೆಗಳ ಡಿಡಿಒಯವರು ನಿಯಮಾನುಸಾರ ವೇತನ /ಭತ್ಯೆಗಳನ್ನು ಸೆಳೆಯದೆ ಹೆಚ್ಚಾಗಿ ಸೆಳೆದಿರುವ, ಪ್ರಕರಣಗಳನ್ನು ಮೇಲೆ (2)ರಲ್ಲಿ ಉಲ್ಲೇಖಿಸಿದ, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ, ಇವರ ದಿನಾಂಕ: 25.09.2013ರ, 14.11.2013ರ ಹಾಗೂ 10.09.2014ರ ಪತ್ರಗಳ ಮೂಲಕ ಸಂಬಂಧಿಸಿದ ಇಲಾಖಾ ಮುಖ್ಯಸ್ಥರ ಗಮನಕ್ಕೆ ತಂದು ಬಟವಾಡೆ ಅಧಿಕಾರಿಗಳಿಂದ ಹೆಚ್ಚಾಗಿ ಸೆಳೆಯಲಾಗಿರುವ ಮೊತ್ತವನ್ನು ಕೂಡಲೇ ಖಜಾನೆಗೆ ಪಾವತಿಸುವಂತೆ ಸೂಕ್ತ ನೋಟಿಸ್‌ಗಳನ್ನು ನೀಡಲು ಹಾಗೂ ಖಜಾನೆಗೆ ಪಾವತಿಸಿರುವ ಬಗ್ಗೆ ಸೂಕ್ತ ದಾಖಲೆಗಳನ್ನು ಕೂಡಲೇ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರು, ಇ–ಆಡಳಿತ ಕೇಂದ್ರ ಇವರಿಗೆ ಕಳುಹಿಸಲು ಸೂಚಿಸಲಾಗಿದೆ. ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ವೇತನಭತ್ಯೆಗಳನ್ನು ಹೆಚ್ಚಾಗಿ ಸೆಳೆದಿರುವ ಮಾಹಿತಿಯನ್ನು ದಾಖಲಿಸುವ ಅವಕಾಶವಿದ್ದು, ಸರಿಯಾದ ದಾಖಲೆಗಳನ್ನು ಅಪ್‌ಲೋಡ್ ಮಾಡಿ ಮಾಹಿತಿಯನ್ನು ಸಹ ದಾಖಲಿಸಲು ಬಟವಾಡೆ ಅಧಿಕಾರಿಗಳಿಗೆ ಸೂಚಿಸಲು ಸಹ ಸದರಿ ಪತ್ರಗಳನ್ವಯ ಕೋರಲಾಗಿದೆ.

3. ಸಂಕ್ಷಿಪ್ತವಾಗಿ ಹೇಳುವುದಾದರೆ, ಇ–ಆಡಳಿತ ಕೇಂದ್ರವು ಕೇವಲ ವಿದ್ಯುನ್ಮಾನ ತಂತ್ರಾಂಶ ಸಾಧನ ಒದಗಿಸುವ ಸಂಸ್ಥೆಯಾಗಿದ್ದು, ಸರ್ಕಾರಿ ನೌಕರರ ಮೂಲ ದಾಖಲಾತಿಗಳು ಮತ್ತು ವೇತನ ಸಂಬಂಧಿತ ದತ್ತಾಂಶವನ್ನು ನಿರ್ವಹಿಸುವುದು. ಡಿಡಿಒಗಳು, ಆಯಾಯ ಇಲಾಖಾ ಮುಖ್ಯಸ್ಥರ ಸುಪರ್ಧಿನಲ್ಲಿರುವುದರಿಂದ ಅವರು ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ನಿಯಮಾನುಸಾರವಿಲ್ಲದ ದತ್ತಾಂಶಗಳನ್ನು ದಾಖಲಿಸಿ ಯಾವುದೇ ಹೆಚ್ಚುವರಿ ವೇತನ ಮತ್ತು ಭತ್ಯೆಗಳನ್ನು ಪಾವತಿಸಿದಲ್ಲಿ ಇಂತಹ ಕ್ರಮಕ್ಕೆ ಅವರು ನೇರವಾಗಿ ಜವಾಬ್ದಾರರಾಗಿರುತ್ತಾರೆಂದು ಉಲ್ಲೇಖಿತ ಸರ್ಕಾರಿ ಆದೇಶ ಮತ್ತು ಪತ್ರಗಳನ್ವಯ ತಿಳಿಸಲಾಗಿದೆ.

4. ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ವೇತನ/ಭತ್ಯೆಗಳಿಗೆ ಸಂಬಂಧಿಸಿದಂತೆ ದಾಖಲಿಸಿದ ದತ್ತಾಂಶದ ಕುರಿತು ಮಹಾಲೇಖಪಾಲರು ಸರ್ಕಾರಕ್ಕೆ ಆಡಿಟ್ ವರದಿಯನ್ನು ಸಲ್ಲಿಸಿದ್ದು ಆ ವರದಿಯಲ್ಲಿನ ಆಕ್ಷೇಪಣೆಗಳು ಕರ್ನಾಟಕ ವಿಧಾನ ಮಂಡಲದ ಸಾರ್ವಜನಿಕ ಲೆಕ್ಕಪತ್ರ ಸಮಿತಿಯ ಮುಂದೆ ಸದ್ಯದಲ್ಲಿಯೇ ಚರ್ಚೆಗೆ ಬರುವ ಸಾಧ್ಯತೆಗಳಿವೆ.

5. ಮಹಾಲೇಖಪಾಲರು ಆಡಿಟ್ ವರದಿಯಲ್ಲಿ ಮಾಡಿರುವ ಆಕ್ಷೇಪಣೆಗಳನ್ನು ನಿಯಮಾನುಸಾರ ವಿವರವಾಗಿ ಪರಿಶೀಲಿಸಿದ ನಂತರ, ಹೆಚ್.ಆರ್.ಎಮ್.ಎಸ್ ತಂತ್ರಾಂಶ(ಸಾಫ್ಟ್‌ವೇರ್)ದಲ್ಲಿ ಈಗ ರಾಜ್ಯ ಸರ್ಕಾರದ ಸೇವಾ/ವ್ಯವಹಾರ ನಿಯಮಗಳಂತೆ ಸಾಧ್ಯವಾಗುವ ಎಲ್ಲಾ ನಿಯಂತ್ರಣಗಳನ್ನು ಅಳವಡಿಸಲಾಗಿದೆ.

6. ಮುಂದುವರೆದು, ಹೆಚ್.ಆರ್.ಎಮ್.ಎಸ್ 1.0 ಆವೃತ್ತಿಯನ್ನು ಹೆಚ್.ಆರ್.ಎಮ್.ಎಸ್ 2.0 ಆವೃತ್ತಿಗೆ ಉನ್ನತೀಕರಿಸಲು ಮೇಲೆ (3)ರಲ್ಲಿ ಉಲ್ಲೇಖಿಸಿದ ದಿನಾಂಕ: 03.09.2014ರ ಆದೇಶದನ್ವಯ ಸರ್ಕಾರವು ಮಂಜೂರಾತಿ ನೀಡಿದ್ದು, ಉನ್ನತೀಕರಣದ ಕಾರ್ಯವು ಪ್ರಗತಿಯಲ್ಲಿದೆ. ಈ ಉನ್ನತೀಕರಣ ವ್ಯವಸ್ಥೆಯಲ್ಲಿ ಹೆಚ್ಚುವರಿ ಕಾರ್ಯಕ್ಷಮತೆಯನ್ನು ಅಭಿವೃದ್ಧಿಗೊಳಿಸುವ ದೃಷ್ಟಿಯಿಂದ ನೌಕರರನ್ನು ಹುದ್ದೆ–ವೃಂದಕ್ಕೆ ಮ್ಯಾಪಿಂಗ್ ಕಲ್ಪಿಸಲು ಕ್ಷೇತ್ರ ಮಟ್ಟದಿಂದ ನೌಕರರ ದತ್ತಾಂಶವನ್ನು ಸಂಗ್ರಹಿಸಿ Organogram ರಚಿಸುವುದು, ವರ್ಕ್ ಫ್ಲೋ ಕಾರ್ಯವಿಧಾನ, ಬಾಹ್ಯ ಮಾಹಿತಿ ತಂತ್ರಜ್ಞಾನ ಸಿಸ್ಟಂಗಳಾದ ಖಜಾನೆ 2.0, ಮಹಾಲೇಖಪಾಲರು ಇತ್ಯಾದಿಗಳೊಂದಿಗೆ ಇಂಟರ್ ಫೇಸ್ ಒದಗಿಸಲಾಗುತ್ತಿದೆ. ಈ ಉನ್ನತೀಕರಣವಾದ ನಂತರ ಆಡಿಟ್ ಆಕ್ಷೇಪಣೆಯಲ್ಲಿರುವ ಎಲ್ಲಾ ಅಂಶಗಳಿಗೆ ಉತ್ತರ ದೊರೆಯಲಿದ್ದು, ಇನ್ನು ಮುಂದೆ ಬಟವಾಡೆ ಅಧಿಕಾರಿಗಳು ಹೆಚ್.ಆರ್.ಎಮ್.ಎಸ್ ನಲ್ಲಿ ನಿಯಮಾನುಸಾರವಿರುವ ಮಾಹಿತಿಯನ್ನು ಮಾತ್ರ ಅಳವಡಿಸಲು ಸಾಧ್ಯವಾಗುತ್ತದೆ.

7. ಈ ಹಿಂದೆ ಮಹಾಲೇಖಪಾಲರು ಮಾಡಿರುವ ಆಕ್ಷೇಪಣೆಗಳಿಗೆ ಸೂಕ್ತ ಉತ್ತರ ನೀಡುವ ಸಲುವಾಗಿ ಬಟವಾಡೆ ಅಧಿಕಾರಿಗಳು ಹೆಚ್ಚಾಗಿ ವೇತನ ಮತ್ತು ಭತ್ಯೆಗಳನ್ನು ಸರ್ಕಾರದ ಲೆಕ್ಕಕ್ಕೆ ಜಮಾ ಮಾಡಲು ನಿರ್ದೇಶನ ನೀಡುವಂತೆ ಎಲ್ಲಾ ಇಲಾಖಾ ಮುಖ್ಯಸ್ಥರುಗಳಿಗೆ ಅನೇಕ ಬಾರಿ ಮೇಲೆ (2)ರಲ್ಲಿ ಉಲ್ಲೇಖಿಸಲಾದ ಪತ್ರಗಳ ಮೂಲಕ ಕೋರಲಾಗಿದೆ. ಆದರೆ ಸುಮಾರು ಒಂದು ವರ್ಷ ಕಳೆದ ನಂತರವೂ ಸಹ ಬಹುಪಾಲು ಉತ್ತರಗಳು ದೊರೆತಿರುವುದಿಲ್ಲ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



8. ಆದ್ದರಿಂದ ನಿಯಮಾನುಸಾರವಲ್ಲದ, ಹೆಚ್ಚಾಗಿ ಸೆಳೆದಿರುವ ವೇತನ ಮತ್ತು ಭತ್ಯೆಗಳನ್ನು ಪೂರ್ಣವಾಗಿ ತಕ್ಷಣವೇ ಖಜಾನೆಗೆ ಪಾವತಿಸುವಂತೆ ಸಂಬಂಧಿಸಿದ ಇಲಾಖಾ ಮುಖ್ಯಸ್ಥರು ಅವರವರ ಅಧೀನದಲ್ಲಿ ಬರುವ ಹಣಸೆಳೆಯುವ ಮತ್ತು ಬಟವಾಡೆ ಅಧಿಕಾರಿ(ಡಿಡಿಒ)ಗಳಿಗೆ ಸೂಚಿಸಬೇಕೆಂದು ಹಾಗೂ ಸಂಬಂಧಿಸಿದ ಮೂಲ ದಾಖಲೆಗಳನ್ನು ಪಡೆದು, ಅದರ ಪ್ರತಿಯೊಂದನ್ನು ಇ–ಆಡಳಿತ ಕೇಂದ್ರಕ್ಕೆ ಕಳುಹಿಸಿ ಕೊಡಬೇಕೆಂದು ಸರ್ಕಾರದ ಎಲ್ಲಾ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಯವರು ಅವರವರ ಆಡಳಿತ ವ್ಯಾಪ್ತಿಗೆ ಸೇರಿದ ಇಲಾಖಾ ಮುಖ್ಯಸ್ಥರುಗಳಿಗೆ ನಿರ್ದೇಶನ ನೀಡಬೇಕೆಂದು ಈ ಮೂಲಕ ಕೋರಿದೆ. (ಸಾಂದರ್ಭಿಕವಾಗಿ ಹೇಳುವುದಾದರೆ ಮೇಲೆ ಉಲ್ಲೇಖಿಸಿದ ಆಡಿಟ್ ಆಕ್ಷೇಪಣೆಗಳಿಗೆ ಸಂಬಂಧಿಸಿದ ಆಡಿಟ್ ವರದಿಯ ವಿಷಯವು ಕರ್ನಾಟಕ ವಿಧಾನ ಮಂಡಲದ ಸಾರ್ವಜನಿಕ ಲೆಕ್ಕಪತ್ರ ಸಮಿತಿಯ ಮುಂದೆ ಚರ್ಚೆಗೆ ಬಂದ ಸಂದರ್ಭದಲ್ಲಿ, ಸಂಬಂಧಿಸಿದ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ /ಪ್ರಧಾನ ಕಾರ್ಯದರ್ಶಿ /ಕಾರ್ಯದರ್ಶಿಯವರು ಸಮಿತಿಯ ಮುಂದೆ ಹಾಜರಾಗಿ, ಅವರವರ ಆಡಳಿತ ವ್ಯಾಪ್ತಿಗೆ ಸೇರಿದ ಇಲಾಖೆಗಳಲ್ಲಿ, ಆ ಆಡಿಟ್ ವರದಿಯಲ್ಲಿ ಉಲ್ಲೇಖಿಸಿದ, ಹೆಚ್ಚಾಗಿ ಸೆಳೆದಿರುವ ವೇತನ ಮತ್ತು ಭತ್ಯೆಗಳ ಬಗ್ಗೆ ಸೂಕ್ತ ಮಾಹಿತಿಯನ್ನು ಸಮಿತಿಗೆ ನೀಡಬೇಕಾಗಬಹುದೆಂದು ಸಹ ಈ ಮೂಲಕ ತಿಳಿಸಿದೆ.)

**ಎಸ್.ವೀಣಾ**

ಪೀಠಾಧಿಕಾರಿ–1

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಇ–ಆಡಳಿತ)

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

# ಕರ್ನಾಟಕ ರಾಜ್ಯಪತ್ರ


ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ- III | ಬೆಂಗಳೂರು, ಶುಕ್ರವಾರ, ಜನವರಿ ೦೨, ೨೦೧೫ (ಪುಷ್ಯ ೧೨, ಶಕ ವರ್ಷ ೧೯೩೬) | ನಂ. ೩ |
|---|---|---|
| **Part- III** | **Bangalore, Friday, January 02, 2015 (Pushya 12, Shaka Varsha 1936)** | **No. 3** |


**ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿಯವರ ಕಾರ್ಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ**

**1ನೆ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ ಡಾ॥ ಅಂಬೇಡ್ಕರ್ ವೀಧಿ, ಬೆಂಗಳೂರು–01**

**ಅಧಿಸೂಚನೆ**

**ನಂ. ಇಎಲ್‌ಎನ್(ಪಂ).ಸಿಆರ್.21/14–15, ದಿನಾಂಕ : 02.01.2015**

ಸರ್ಕಾರದ ಪತ್ರ ಸಂ. ಸಇ 286 ಎಂಆರ್‌ಇ 2014, ದಿನಾಂಕ 06.09.2014 ಹಾಗೂ ನಿರ್ದೇಶಕರು, ಕೃಷಿ ಮಾರುಕಟ್ಟೆ ಇಲಾಖೆ, ಬೆಂಗಳೂರು ರವರ ಆದೇಶ ಸಂ.ಕೃಮಾಇ 15 ಚುನಾವಣೆ 2013, ದಿನಾಂಕ 08.09.2014 ರಂತೆ ಮತ್ತು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 2(2), 11(1)ನ್ನು ಅನುಸರಿಸಿ, ಸಲ್ಮಾ ಕೆ. ಫಹೀಮ್, ಭಾ.ಆ.ಸೇ., ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಆದ ನಾನು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 14(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ಹೊಸಕೋಟೆ** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ 11 ಏಕ ಸದಸ್ಯ ಕೃಷಿಕ ಚುನಾವಣಾ ಕ್ಷೇತ್ರಗಳನ್ನು ಒಳಗೊಂಡಂತೆ ಒಟ್ಟು 14 ಕ್ಷೇತ್ರಗಳ ಪ್ರಾದೇಶಿಕ ವ್ಯಾಪ್ತಿಯನ್ನು ಕೆಳಕಾಣಿಸಿದ ಅನುಸೂಚಿಯಂತೆ ನಿಗದಿಪಡಿಸಿದೆ. ಸದರಿ 11 ಏಕ ಸದಸ್ಯ ಕೃಷಿಕ ಚುನಾವಣಾ ಕ್ಷೇತ್ರಗಳ ಪೈಕಿ ಮಹಿಳೆ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ "ಅ" ಪ್ರವರ್ಗ ಹಾಗೂ ಹಿಂದುಳಿದ "ಬ" ಪ್ರವರ್ಗಕ್ಕೆ ತಲಾ ಒಂದು ಸ್ಥಾನವನ್ನು ಆ ಅನುಸೂಚಿಯ ಅಂಕಣ(6)ರಲ್ಲಿ ನಮೂದಿಸಿರುವಂತೆ ಮೀಸಲಿರಿಸಲಾಗಿದೆ ಎಂದು ಈ ಮೂಲಕ ಅಧಿಸೂಚಿಸಿರುತ್ತೇನೆ.

**ಕೋಷ್ಟಕ**

**ಹೊಸಕೋಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ವ್ಯಾಪ್ತಿಯ ಕ್ಷೇತ್ರಗಳು**

| ಕ್ರ. ಸಂ. | ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ | | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗದಿ ಪಡಿಸಲಾದ ಮೀಸಲಾತಿ |
|---|---|---|---|---|---|---|
| | | ಕಂದಾಯ ವೃತ್ತದ ಹೆಸರು | ಗ್ರಾಮಗಳ ಹೆಸರು | | | |
| **1** | **2** | **3** | **4** | | **5** | **6** |
| 1 | 1–ಸೂಲಿಬೆಲೆ | 1. ಈಸ್ತೂರು | 1 | ಈಸ್ತೂರು | ಒಂದು | ಸಾಮಾನ್ಯ |
| | | | 2 | ಈಹೊಸಹಳ್ಳಿ, | | |
| | | | 3 | ರಾಳಕುಂಟೆ | | |
| | | | 4 | ಚೀಮಸಂದ್ರ | | |
| | | | 5 | ಶಿವಪುರ(ಬೇ) | | |
| | | | 6 | ದಿಂಬಹಳ್ಳಿ(ಬೇ) | | |
| | | | 7 | ಅನುಪಹಳ್ಳಿ | | |
| | | | 8 | ಈ ಅಮಾನಿಕೆರೆ | | |
| | | 2. ಬೆಂಡಿಗಾನಹಳ್ಳಿ | 9 | ಬೆಂಡಿಗಾನಹಳ್ಳಿ | | |
| | | | 10 | ತಿಮ್ಮಪ್ಪನಹಳ್ಳಿ | | |
| | | | 11 | ತೆನೆಯೂರು | | |

| ಕ್ರ. ಸಂ. | ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ | | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗದಿ ಪಡಿಸಲಾದ ಮೀಸಲಾತಿ |
|---|---|---|---|---|---|---|
| | | ಕಂದಾಯ ವೃತ್ತದ ಹೆಸರು | ಗ್ರಾಮಗಳ ಹೆಸರು | | | |
| | | | 12 | ಚಿಕ್ಕ ಅರಳಗೆರೆ | | |
| | | | 13 | ದ್ಯಾವಸಂದ್ರ | | |
| | | | 14 | ಬಾಲೇನಹಳ್ಳಿ | | |
| | | | 15 | ಐಮನಹಳ್ಳಿ | | |
| | | | 16 | ಮಟ್ನಬಾರು | | |
| | | | 17 | ಚಿಕ್ಕಕುರುಬರಹಳ್ಳಿ | | |
| | | | 18 | ಹನಿಯೂರು | | |
| | | 3. ಸೂಲಿಬೆಲೆ | 19 | ಸೂಲಿಬೆಲೆ | | |
| | | | 20 | ಗಿಡ್ಡಪ್ಪನಹಳ್ಳಿ | | |
| | | | 21 | ಬೆಟ್ಟಹಳ್ಳಿ | | |
| | | | 22 | ರಾಂಪುರ | | |
| | | | 23 | ಕದರನಪುರ | | |
| | | | 24 | ಅಂಕೋನಹಳ್ಳಿ | | |
| | | | 25 | ಅರಸನಹಳ್ಳಿ | | |
| | | | 26 | ನಲ್ಲಗಾನಹಳ್ಳಿ | | |
| | | | 27 | ಶಾಂತನಪುರ | | |
| | | | 28 | ವೆಂಕಟೇಶಪುರ | | |
| | | | 29 | ಬತ್ತಿಗಾನಹಳ್ಳಿ | | |
| | | | 30 | ಕೆ ಕೆ ಬೀಡು | | |
| | | | 31 | ವಳಗೆರೆಪುರ | | |
| | | | 32 | ಕೋಡಿಪುರ | | |
| | | | 33 | ಚೌಡಸಂದ್ರ | | |
| | | 4. ದೊಡ್ಡರಳಗೆರೆ | 34 | ದೊಡ್ಡಅರಳಗೆರೆ | | |
| | | | 35 | ಶಶಿಮಾಕನಹಳ್ಳಿ | | |
| | | | 36 | ಟಿ.ಅಗ್ರಹಾರ | | |
| | | | 37 | ಭುವನಹಳ್ಳಿ | | |
| | | | 38 | ಬಾವಾಪುರ | | |
| | | | 39 | ಹೊಸದಿಂಬಹಳ್ಳಿ | | |
| | | | 40 | ತಮ್ಮರಸನಹಳ್ಳಿ | | |
| | | | 41 | ಸಿದ್ದೇನಹಳ್ಳಿ | | |
| | | | 42 | ಶ್ರೀನಿವಾಸಪುರ | | |
| | | | 43 | ಅಮಾನಿ ಅರಳಗೆರೆ | | |
| | | | 44 | ಪುಲಮಂಚಿ | | |
| 2 | 2–ಕಂಬಳೀಪುರ | 5. ಅತ್ತಿಬೆಲೆ | 45 | ಅತ್ತಿಬೆಲೆ | ಒಂದು | ಪರಿಶಿಷ್ಟ ಜಾತಿ |
| | | | 46 | ಯನಗುಂಟೆ | | |
| | | | 47 | ಸಾದಪ್ಪನಹಳ್ಳಿ | | |
| | | | 48 | ಎತ್ತಿನವಡೆಯಪುರ | | |
| | | 6. ಹಸಿಗಾಳ | 49 | ಹಸಿಗಾಳ | | |
| | | | 50 | ತಿಮ್ಮಸಂದ್ರ | | |
| | | | 51 | ಕಮ್ಮಸಂದ್ರ | | |

| ಕ್ರ. ಸಂ. | ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ | | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗದಿ ಪಡಿಸಲಾದ ಮೀಸಲಾತಿ |
|---|---|---|---|---|---|---|
| | | ಕಂದಾಯ ವೃತ್ತದ ಹೆಸರು | ಗ್ರಾಮಗಳ ಹೆಸರು | | | |
| | | | 52 | ಶಿವದೇನಹಳ್ಳಿ | | |
| | | 7. ಕಂಬಳೀಪುರ | 53 | ಕಂಬಳೀಪುರ | | |
| | | | 54 | ಕೆಂಪಾಪುರ | | |
| | | | 55 | ಸೊಣ್ಣಹಳ್ಳಿಪುರ | | |
| | | | 56 | ಎಂ ಸತ್ಯವಾರ | | |
| | | | 57 | ಈ ಮುತ್ಸಂದ್ರ | | |
| | | | 58 | ಏಕರಾಜಪುರ | | |
| | | 8. ಬೇಗೂರು | 59 | ಬೇಗೂರು | | |
| | | | 60 | ಬೀಮಕನಹಳ್ಳಿ | | |
| | | | 61 | ಸೊಣ್ಣಬೈಚನಹಳ್ಳಿ | | |
| | | | 62 | ಮುತ್ತುಕದಹಳ್ಳಿ | | |
| | | | 63 | ಗುಂಡ್ರಹಳ್ಳಿ | | |
| | | | 64 | ಬಾಗಲೂರು | | |
| | | | 65 | ದೊಡ್ಡಕೋಲಿಗ | | |
| | | | 66 | ಚಿಕ್ಕಕೋಲಿಗ | | |
| | | | 67 | ನಗರೇನಹಳ್ಳಿ | | |
| | | | 68 | ಗುಳ್ಳಹಳ್ಳಿ | | |
| | | | 69 | ವನಮನಹಳ್ಳಿ | | |
| 3 | 3–ಕುಂಬಳಹಳ್ಳಿ | 9. ಆಲಪ್ಪನಹಳ್ಳಿ | 70 | ಆಲಪ್ಪನಹಳ್ಳಿ | ಒಂದು | ಸಾಮಾನ್ಯ |
| | | | 71 | ಲಕ್ಕೊಂಡಹಳ್ಳಿ | | |
| | | | 72 | ಶಂಖಣೀಪುರ | | |
| | | | 73 | ವಾಬಸಂದ್ರ | | |
| | | 10. ದೊಡ್ಡಹುಲ್ಲೂರು | 74 | ದೊಡ್ಡಹುಲ್ಲೂರು | | |
| | | | 75 | ಚಿಕ್ಕಹುಲ್ಲೂರು | | |
| | | | 76 | ಚೊಕ್ಕಹಳ್ಳಿ | | |
| | | | 77 | ಪಿಲ್ಲಗುಂಪೆ | | |
| | | | 78 | ಚೋಳಪ್ಪನಹಳ್ಳಿ | | |
| | | | 79 | ಮಲ್ಲಿಮಾಕನಪುರ | | |
| | | | 80 | ಚಿಕ್ಕನಲ್ಲೂರಹಳ್ಳಿ | | |
| | | | 81 | ದಾಸರತಿಮ್ಮನಹಳ್ಳಿ (ಬೇ) | | |
| | | | 82 | ಯಳಚನಾಯ್ಕನಪುರ | | |
| | | | 83 | ಹುಲ್ಲೂರು ಅಮಾನಿಕೆರೆ (ಬೆ) | | |
| | | 11. ಕುಂಬಳಹಳ್ಳಿ, | 84 | ಕುಂಬಳಹಳ್ಳಿ | | |
| | | | 85 | ಕುರಬರಹಳ್ಳಿ | | |
| | | | 86 | ಕಲ್ಲಹಳ್ಳಿ | | |
| | | | 87 | ಉಪ್ಪಾರಹಳ್ಳಿ | | |
| | | | 88 | ಸೋಂಪುರ | | |
| | | | 89 | ಸೊಣ್ಣದೇನಹಳ್ಳಿ | | |
| | | | 90 | ಅಮಾನಿ ಚಿಕ್ಕಕೆರೆ | | |

| ಕ್ರ. ಸಂ. | ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ | | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗದಿ ಪಡಿಸಲಾದ ಮೀಸಲಾತಿ |
|---|---|---|---|---|---|---|
| | | ಕಂದಾಯ ವೃತ್ತದ ಹೆಸರು | ಗ್ರಾಮಗಳ ಹೆಸರು | | | |
| 4 | 4–ಹೊಸಕೋಟೆ | 12. ದೊಡ್ಡಗಟ್ಟಿಗನಬ್ಬೆ | 91 | ದೊಡ್ಡಗಟ್ಟಿಗೆನಬ್ಬೆ | ಒಂದು | ಪರಿಶಿಷ್ಟ ಪಂಗಡ |
| | | | 92 | ಚಿಕ್ಕಗಟ್ಟಿಗೆನಬ್ಬೆ | | |
| | | | 93 | ಸರ್ಕಾರಿ ಗುಟ್ಟಹಳ್ಳಿ | | |
| | | | 94 | ಪೂಜೇನ ಅಗ್ರಹಾರ | | |
| | | | 95 | ಚೀಮಂಡಹಳ್ಳಿ | | |
| | | | 96 | ಗಣಗಲು | | |
| | | | 97 | ಪೆತ್ತನಹಳ್ಳಿ | | |
| | | | 98 | ಹೊಸಕೋಟೆ | | |
| | | | 99 | ಅಮಾನಿ ದೊಡ್ಡಕೆರೆ | | |
| | | 13. ಮಲ್ಲಸಂದ್ರ | 100 | ಮಲ್ಲಸಂದ್ರ | | |
| | | | 101 | ಅಪ್ಪಾಜಿಪುರ | | |
| | | | 102 | ಕೊರಳೂರು | | |
| | | | 103 | ಭಕ್ತರಹಳ್ಳಿ | | |
| | | | 104 | ನಡುವತ್ತಿ | | |
| 5 | 5–ಅನುಗೊಂಡನಹಳ್ಳಿ | 14. ಸಮೇತನಹಳ್ಳಿ | 105 | ಸಮೇತನಹಳ್ಳಿ | ಒಂದು | ಸಾಮಾನ್ಯ |
| | | | 106 | ತಿರುಮಲಶೆಟ್ಟಿಹಳ್ಳಿ | | |
| | | | 107 | ಬೋದನಹೊಸಹಳ್ಳಿ | | |
| | | | 108 | ಹೆಮ್ಮಂಡಹಳ್ಳಿ | | |
| | | | 109 | ದೊಡ್ಡದುನ್ನಸಂದ್ರ | | |
| | | 15. ಮುತ್ಸಂದ್ರ | 110 | ಮುತ್ಸಂದ್ರ | | |
| | | | 111 | ಬೆಳ್ಳಿಕೆರೆ | | |
| | | | 112 | ಹಾರೋಹಳ್ಳಿ | | |
| | | | 113 | ಕೋಟೂರು | | |
| | | | 114 | ಅಜ್ಜಗೊಂಡನಹಳ್ಳಿ | | |
| | | | 115 | ತಿಮ್ಮಂಡಹಳ್ಳಿ | | |
| | | | 116 | ಗುಳ್ಳಿಕಾಯಿಪುರ | | |
| | | 16. ಅನುಗೊಂಡಹಳ್ಳಿ | 117 | ಅನುಗೊಂಡನಹಳ್ಳಿ | | |
| | | | 118 | ಯಡಗೊಂಡನಹಳ್ಳಿ | | |
| | | | 119 | ಓಬಳಾಪುರ | | |
| | | | 120 | ನಾಗನಾಯಕನಕೋಟೆ | | |
| | | | 121 | ಮುತ್ತಕದಹಳ್ಳಿ | | |
| | | | 122 | ಮುತ್ಕೂರು | | |
| | | | 123 | ಬ್ಯಾಲಹಳ್ಳಿ | | |
| 6 | 6–ಗಣಗಲೂರು | 17. ಮಾಕನಹಳ್ಳಿ | 124 | ದೊಡ್ಡದಾಸರಹಳ್ಳಿ | ಒಂದು | ಹಿಂದುಳಿದ ವರ್ಗ–ಅ |
| | | | 125 | ತರಬಹಳ್ಳಿ | | |
| | | 18. ಮೇಡಿಮಲ್ಲಸಂದ್ರ | 126 | ಮೇಡಿಮಲ್ಲಸಂದ್ರ | | |
| | | | 127 | ಹಂದೇನಹಳ್ಳಿ | | |
| | | | 128 | ಬಾಣಾರಹಳ್ಳಿ | | |
| | | 19. ಅರೇಹಳ್ಳಿ | 129 | ಕಲ್ಕುಂಟೆ ಅಗ್ರಹಾರ | | |
| | | | 130 | ನಾರಾಯಣಕೆರೆ | | |

| ಕ್ರ. ಸಂ. | ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ | | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗದಿ ಪಡಿಸಲಾದ ಮೀಸಲಾತಿ |
|---|---|---|---|---|---|---|
| | | ಕಂದಾಯ ವೃತ್ತದ ಹೆಸರು | ಗ್ರಾಮಗಳ ಹೆಸರು | | | |
| | | | 131 | ಬೈರಹಳ್ಳಿ | | |
| | | | 132 | ಅರೇಹಳ್ಳಿ | | |
| | | 20. ಗಣಗಲೂರು | 133 | ಗಣಗಲೂರು | | |
| | | | 134 | ಗುಂಡೂರು | | |
| | | | 135 | ಶಿವನಾಪುರ | | |
| | | | 136 | ಸಿದ್ದನಪುರ | | |
| | | | 137 | ತಿರುವರಂಗ | | |
| | | | 138 | ತತ್ತನೂರು | | |
| | | | 139 | ಬಾಗೂರು | | |
| | | | 140 | ಮಾರಂಗೆರೆ | | |
| | | 21. ದೇವನಗುಂದಿ | 141 | ದೇವನಗುಂದಿ | | |
| | | | 142 | ದೇವಲಾಪುರ | | |
| | | | 143 | ಡಿ ಹೊಸಹಳ್ಳಿ | | |
| | | | 144 | ಮೇಡಹಳ್ಳಿ | | |
| | | | 145 | ಲಿಂಗಧೀರಮಲ್ಲಸಂದ್ರ | | |
| | | | 146 | ಸೋಮಲಾಪುರ | | |
| | | | 147 | ಬಸಬತ್ತನಹಳ್ಳಿ | | |
| 7 | 7– ವಾಗಟ | 22. ಕೋಡಿಹಳ್ಳಿ | 148 | ಕೋಡಿಹಳ್ಳಿ | ಒಂದು | ಸಾಮಾನ್ಯ |
| | | | 149 | ಬಿಸನಹಳ್ಳಿ | | |
| | | | 150 | ಕಾಚರಕನಹಳ್ಳಿ | | |
| | | | 151 | ದೇವಶೆಟ್ಟಹಳ್ಳಿ | | |
| | | 23. ವಾಗಟ | 152 | ವಾಗಟ | | |
| | | | 153 | ವಾಗಟ ಅಗ್ರಹಾರ | | |
| | | | 154 | ಜಿನ್ನಾಗರ | | |
| | | | 155 | ವಡಿಗೇನಹಳ್ಳಿ | | |
| | | 24. ಮಾಕನಹಳ್ಳಿ | 156 | ಮಾಕನಹಳ್ಳಿ | | |
| | | | 157 | ಕಣ್ಣಿಕಲ್ಲು | | |
| | | | 158 | ಹುಣಸೇಹಳ್ಳಿ | | |
| | | 25. ಹೊಣಚನಹಳ್ಳಿ | 159 | ಹೊನಚನಹಳ್ಳಿ | | |
| | | | 160 | ಕುರಬರಗೊಲ್ಲಹಳ್ಳಿ | | |
| | | | 161 | ಬನಹಳ್ಳಿ | | |
| | | | 162 | ಗೋವಿಂದಪುರ | | |
| | | | 163 | ತಿಂಡ್ಲು | | |
| | | | 164 | ಪರಮನಹಳ್ಳಿ | | |
| | | | 165 | ಕಾಮರಸನಹಳ್ಳಿ | | |
| | | 26. ಕಟ್ಟಿಗೇನಹಳ್ಳಿ | 166 | ಕಟ್ಟಿಗೇನಹಳ್ಳಿ | | |
| | | | 167 | ಖಾಜಿಹೊಸಹಳ್ಳಿ | | |
| | | | 168 | ಬೊಮ್ಮನಬಂಡೆ | | |
| | | | 169 | ದೇವರಗೊಲ್ಲಹಳ್ಳಿ | | |
| | | | 170 | ಮಾರಗೊಂಡನಹಳ್ಳಿ | | |

| ಕ್ರ. ಸಂ. | ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ | | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗದಿ ಪಡಿಸಲಾದ ಮೀಸಲಾತಿ |
|---|---|---|---|---|---|---|
| | | ಕಂದಾಯ ವೃತ್ತದ ಹೆಸರು | ಗ್ರಾಮಗಳ ಹೆಸರು | | | |
| 8 | 8– ಜಡಿಗೇನಹಳ್ಳಿ | 27. ಕೊಳತೂರು | 171 | ಕೊಳತೂರು | ಒಂದು | ಹಿಂದುಳಿದ ವರ್ಗ – ಬ |
| | | | 172 | ಕಣ್ಣೂರಹಳ್ಳಿ | | |
| | | | 173 | ದಂಡುಪಾಳ್ಯ | | |
| | | | 174 | ವರದಾಪುರ | | |
| | | | 175 | ಹಲಸನಹಳ್ಳಿ | | |
| | | | 176 | ದಾಸರಹಳ್ಳಿ | | |
| | | 28. ಜಡಿಗೇನಹಳ್ಳಿ | 177 | ಜಡಿಗೇನಹಳ್ಳಿ | | |
| | | | 178 | ಕರಿಬೀರನಹೊಸಹಳ್ಳಿ | | |
| | | | 179 | ಹರಳೂರು | | |
| | | | 180 | ಭಕ್ತಗೊಂಡನಹಳ್ಳಿ (ಬೇ) | | |
| | | | 181 | ಅರಳೇ ಮಾಕನಹಳ್ಳಿ (ಬೇ) | | |
| | | | 182 | ಚಂದ್ರಾಪುರ (ಬೇ) | | |
| | | | 183 | ವಿಜಯಪುರ (ಬೇ) | | |
| | | 29. ಓರೋಹಳ್ಳಿ | 184 | ಓರೂಹಳ್ಳಿ | | |
| | | | 185 | ಅಪ್ಪಸಂದ್ರ | | |
| | | | 186 | ಚಿಕ್ಕತಗ್ಗಲಿ | | |
| | | | 187 | ಅಂಬಲೀಪುರ | | |
| | | | 188 | ತಗ್ಗಲಿಹೊಸಹಳ್ಳಿ | | |
| | | | 189 | ದೊಡ್ಡತಗ್ಗಲಿ | | |
| | | | 190 | ಬೆಳಮಂಗಲ | | |
| | | | 191 | ಗೋಣಕನಹಳ್ಳಿ | | |
| | | | 192 | ಇಂಜನಹಳ್ಳಿ | | |
| | | | 193 | ತಿರಟಹಳ್ಳಿ | | |
| | | 30. ದೊಡ್ಡನಲ್ಲಾಳ | 194 | ಉಮ್ಮಲು | | |
| | | | 195 | ತಿಮ್ಮಾಪುರ | | |
| | | | 196 | ದೊಡ್ಡದೇನಹಳ್ಳಿ | | |
| | | | 197 | ಅಲಗೊಂಡನಹಳ್ಳಿ | | |
| | | | 198 | ದೊಡ್ಡನಲ್ಲಾಲ | | |
| | | | 199 | ಚಿಕ್ಕನಲ್ಲಾಳ | | |
| | | | 200 | ದಬ್ಬಗುಂಟೆ | | |
| | | | 201 | ಹಲಸಿನಕಾಯಿಪುರ | | |
| | | | 202 | ಗೂಗುಟ್ಟಹಳ್ಳಿ | | |
| | | | 203 | ಯಳಚಾಮನಹಳ್ಳಿ | | |
| 9 | 9–ತಾವರೆಕೆರೆ | 31. ನಿಡಘಟ್ಟ | 204 | ನಿಡಘಟ್ಟ | ಒಂದು | ಸಾಮಾನ್ಯ |
| | | | 205 | ಅತ್ತಿವಟ್ಟ | | |
| | | | 206 | ಅಟ್ಟೂರು | | |
| | | | 207 | ಗೊಟ್ಟಿಪುರ | | |
| | | | 208 | ತವಟಹಳ್ಳಿ | | |
| | | | 209 | ಸೋಲೂರು | | |

| ಕ್ರ. ಸಂ. | ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ | | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗದಿ ಪಡಿಸಲಾದ ಮೀಸಲಾತಿ |
|---|---|---|---|---|---|---|
| | | ಕಂದಾಯ ವೃತ್ತದ ಹೆಸರು | ಗ್ರಾಮಗಳ ಹೆಸರು | | | |
| | | | 210 | ಮಟ್ನಹಳ್ಳಿ (ಬೇ) | | |
| | | 32. ಮುಗಬಾಳ | 211 | ಮುಳಬಾಳ | | |
| | | | 212 | ದೊಡ್ಡನಲ್ಲೂರಹಳ್ಳಿ | | |
| | | | 213 | ಪೂಜಾರಾಮನಹಳ್ಳಿ | | |
| | | | 214 | ನಕ್ಕನಹಳ್ಳಿ | | |
| | | | 215 | ವಳಗೆರೆಪುರ | | |
| | | | 216 | ಚನ್ನಪುರ | | |
| | | | 217 | ವೀರಾಪುರ | | |
| | | | 218 | ಮೈಲಾಪುರ | | |
| | | | 219 | ಚಿನ್ನಂಡಹಳ್ಳಿ | | |
| | | | 220 | ಎಂ ಹೊಸಹಳ್ಳಿ | | |
| | | 33. ತಾವರೆಕೆರೆ | 221 | ತಾವರೆಕೆರೆ | | |
| | | | 222 | ಯಳಚಹಳ್ಳಿ | | |
| | | | 223 | ಗಂಗಾಪುರ | | |
| | | | 224 | ಮಂಚಪ್ಪನಹಳ್ಳಿ | | |
| | | | 225 | ಗೊರವೇಹಳ್ಳಿ | | |
| | | | 226 | ವೆಂಕಟಪುರ | | |
| | | | 227 | ಗೇರಹಳ್ಳಿ | | |
| | | | 228 | ಬಾಣಮಾಕನಹಳ್ಳಿ | | |
| | | | 229 | ಕಾಳಪ್ಪನಹಳ್ಳಿ | | |
| 10 | 10–ಶಿವನಾಪುರ | 34. ಶಿವನಾಪುರ | 230 | ಮೋತಕದಹಳ್ಳಿ | ಒಂದು | ಮಹಿಳೆ |
| | | | 231 | ಶಿವನಾಪುರ | | |
| | | | 232 | ಭೀಮಾಪುರ | | |
| | | | 233 | ಬಿಸನಹಳ್ಳಿ | | |
| | | | 234 | ಗುಲ್ಲೇನಹಳ್ಳಿ | | |
| | | 35. ಕರಪನಹಳ್ಳಿ | 235 | ಕರಪನಹಳ್ಳಿ | | |
| | | | 236 | ಎಂ ಹೊಸಹಳ್ಳಿ | | |
| | | | 237 | ಡಿ ಶೆಟ್ಟಿಹಳ್ಳಿ | | |
| | | | 238 | ದೊಡ್ಡೇನಹಳ್ಳಿ | | |

| ಕ್ರ. ಸಂ. | ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ | | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗದಿ ಪಡಿಸಲಾದ ಮೀಸಲಾತಿ |
|---|---|---|---|---|---|---|
| | | ಕಂದಾಯ ವೃತ್ತದ ಹೆಸರು | ಗ್ರಾಮಗಳ ಹೆಸರು | | | |
| | | | 239 | ಮಲಿಯಪ್ಪನಹಳ್ಳಿ | | |
| | | 36. ಹೆತ್ತಕ್ಕಿ | 240 | ಕೆ ಸತ್ಯವಾರ | | |
| | | | 241 | ಹೆತ್ತಕ್ಕಿ | | |
| | | | 242 | ಬೀರಹಳ್ಳಿ | | |
| | | | 243 | ಹುಳುವನಹಳ್ಳಿ | | |
| | | | 244 | ಮಾರಸಂಡಹಳ್ಳಿ | | |
| | | | 245 | ಓಬಳಹಳ್ಳಿ | | |
| | | | 246 | ಬಂಡಹಳ್ಳಿ | | |
| | | | 247 | ಲಿಂಗಾಪುರ | | |
| | | | 248 | ಅಗಸರಹಳ್ಳಿ | | |
| | | | 249 | ಸತ್ತಿಗಾನಹಳ್ಳಿ | | |
| | | | 250 | ಗುಡ್ಡದ ಚನ್ನೇನಹಳ್ಳಿ | | |
| | | | 251 | ಕೋಳಳ ಚೆನ್ನೇನಹಳ್ಳಿ | | |
| | | 37. ಕೊರಟಿ<br>38. ಬೈಲನರಸಾಪುರ | 252 | ಕೊರಟಿ | | |
| | | | 253 | ಹೆಡಕನಹಳ್ಳಿ | | |
| | | | 254 | ದೊಡ್ಡಗಾನಹಳ್ಳಿ | | |
| | | | 255 | ಗುಂಡ್ರಹಳ್ಳಿ | | |
| | | | 256 | ತಿಮ್ಮಸಂದ್ರ | | |
| | | | 257 | ಸೊಣ್ಣೇಕೆಂಪನಹಳ್ಳಿ | | |
| | | | 258 | ಬೈಲನರಸಾಪುರ | | |
| | | | 259 | ದೊಡ್ಡರಾಮನಹಳ್ಳಿ | | |
| 11 | 11– ನಂದಗುಡಿ | 39. ಕೆಂಬಳಿಗಾನಹಳ್ಳಿ | 260 | ಕೆಂಬಳಿಗಾನಹಳ್ಳಿ | ಒಂದು | ಸಾಮಾನ್ಯ |
| | | | 261 | ಸಿ ಟಿ ಗೊಲ್ಲಹಳ್ಳಿ | | |
| | | | 262 | ಗಡಿಗೇನಹಳ್ಳಿ | | |
| | | | 263 | ಸಿದ್ದಾಪುರ | | |
| | | | 264 | ಚಿಕ್ಕನಹಳ್ಳಿ | | |
| | | 40. ಎನ್ ಹೊಸಹಳ್ಳಿ | 265 | ಎನ್ ಹೊಸಹಳ್ಳಿ | | |
| | | | 266 | ಕೊಂಡ್ರಹಳ್ಳಿ | | |

| ಕ್ರ. ಸಂ. | ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ | | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗದಿ ಪಡಿಸಲಾದ ಮೀಸಲಾತಿ |
|---|---|---|---|---|---|---|
| | | ಕಂದಾಯ ವೃತ್ತದ ಹೆಸರು | ಗ್ರಾಮಗಳ ಹೆಸರು | | | |
| | | | 267 | ಮೇಡೂರು | | |
| | | | 268 | ಮುದ್ದನಹಳ್ಳಿ | | |
| | | 41. ನಂದಗುಡಿ | 269 | ನಂದಗುಡಿ | | |
| | | | 270 | ಚೊಕ್ಕಸಂದ್ರ | | |
| | | | 271 | ಗಿಡ್ನಹಳ್ಳಿ | | |
| | | 42. ಸಿದ್ದನಹಳ್ಳಿ | 272 | ಸಿದ್ದನಹಳ್ಳಿ | | |
| | | | 273 | ಕಾರಹಳ್ಳಿ | | |
| | | | 274 | ಕೆ ಶೆಟ್ಟಹಳ್ಳಿ | | |
| | | | 275 | ಎ ವಡ್ಡಹಳ್ಳಿ | | |
| | | | 276 | ಯಶವಂತಪುರ | | |
| | | | 277 | ಎಸ್ ವಡ್ಡಹಳ್ಳಿ | | |
| | | 43. ನೆಲವಾಗಿಲು | 278 | ನೆಲವಾಗಿಲು | | |
| | | | 279 | ಅರೇಹಳ್ಳಿ | | |
| | | | 280 | ದಳಸಗೆರೆ | | |
| | | | 281 | ಸರಕನೂರು | | |
| | | | 282 | ಎತ್ತಿನೂಡೆಯಪುರ | | |
| | | 44. ಹಿಂಡಿಗನಾಳ | 283 | ಹಿಂಡಿಗನಾಳ | | |
| | | | 284 | ತರಬಹಳ್ಳಿ | | |
| | | | 285 | ಚಿಕ್ಕೊಂಡಹಳ್ಳಿ | | |
| | | | 286 | ಹೊಸಹರಡಿ | | |
| | | | 287 | ಹೊಸವೆಂಕಟಾಪುರ | | |
| | | 45. ಇಟ್ಟಸಂದ್ರ | 288 | ಇಟ್ಟಸಂದ್ರ | | |
| | | | 289 | ರಾಮಗೋವಿಂದಪುರ | | |
| | | | 290 | ಬನಹಳ್ಳಿ | | |
| | | | 291 | ಗೆದ್ದಲಹಳ್ಳಿಪುರ | | |
| 12 | 12–ವರ್ತಕರ ಕ್ಷೇತ್ರ | ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಹೊಸಕೋಟೆ | | ಹೊಸಕೋಟೆ ತಾಲ್ಲೂಕು ವ್ಯಾಪ್ತಿ | ಒಂದು | ಸಾಮಾನ್ಯ |
| 13 | 13–ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ಕ್ಷೇತ್ರ | ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ, ಹೊಸಕೋಟೆ | | ಹೊಸಕೋಟೆ ತಾಲ್ಲೂಕು ವ್ಯಾಪ್ತಿ | ಒಂದು | ಸಾಮಾನ್ಯ |

| ಕ್ರ. ಸಂ. | ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಕ್ಷೇತ್ರದ ವ್ಯಾಪ್ತಿ | | | ಚುನಾಯಿಸ ಬೇಕಾದ ಸದಸ್ಯರ ಸಂಖ್ಯೆ | ನಿಗದಿ ಪಡಿಸಲಾದ ಮೀಸಲಾತಿ |
|---|---|---|---|---|---|---|
| | | ಕಂದಾಯ ವೃತ್ತದ ಹೆಸರು | ಗ್ರಾಮಗಳ ಹೆಸರು | | | |
| 14 | 14–ಕೃಷಿ ಹುಟ್ಟುವಳಿ ಸಂಸ್ಕರಣ ಸಹಕಾರ ಸಂಘ ಕ್ಷೇತ್ರ | – | | ಹೊಸಕೋಟೆ ತಾಲ್ಲೂಕು ವ್ಯಾಪ್ತಿ | ಒಂದು | ಸಾಮಾನ್ಯ |

**ಸಲ್ಮಾ ಕೆ. ಫಹೀಮ್**
ಜಿಲ್ಲಾಧಿಕಾರಿ
ಬೆಂಗಳೂರು ಗ್ರಾಮಾಂತರ ಜಿಲ್ಲೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ– III | ಬೆಂಗಳೂರು, ಮಂಗಳವಾರ, ಜನವರಿ ೦೬, ೨೦೧೫ (ಪುಷ್ಯ ೧೬, ಶಕ ವರ್ಷ ೧೯೩೬) | ನಂ. ೧೭ |
|---|---|---|
| **Part– III** | **Bengaluru, Tuesday, January 06, 2015 (Pushya 16, Shaka Varsha 1936)** | **No. 17** |


**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

ಕರ್ನಾಟಕ ರಾಜ್ಯ ಸಹಕಾರ ಮಾರಾಟಮಂಡಳಿ ಕಟ್ಟಡ (ಹಿಂಭಾಗ) 1ನೇ ಮಹಡಿ
ನಂ. 8, ಕನ್ನಿಂಗ್ ಹ್ಯಾಂ ರಸ್ತೆ. ಬೆಂಗಳೂರು–52

**ಆದೇಶ**

**ನಂ.ರಾಚುಆ. 51 .ಟಿಜಡ್‌ಪಿ.2014, ದಿನಾಂಕ : 06–01–2015**

ರಾಜ್ಯ ಚುನಾವಣಾ ಆಯೋಗವು ವಿವಿಧ ಜಿಲ್ಲೆಗಳಲ್ಲಿ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿಗಳಲ್ಲಿ ತೆರವಾಗಿರುವ ಸದಸ್ಯ ಸ್ಥಾನಗಳಿಗೆ ಉಪ ಚುನಾವಣೆಯನ್ನು ನಡೆಸಲು ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು 1993 ರ ನಿಯಮ 12 ರ ಅನ್ವಯ ಚುನಾವಣಾ ವೇಳಾ ಪಟ್ಟಿಯನ್ನು ಈ ಕೆಳಕಂಡಂತೆ ಪ್ರಕಟಿಸಿದೆ. ಚುನಾವಣೆ ನಡೆಸಬೇಕಾದ ಸದಸ್ಯ ಸ್ಥಾನಗಳ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ.

**ಚುನಾವಣಾ ವೇಳಾ ಪಟ್ಟಿ**

1. ಜಿಲ್ಲಾಧಿಕಾರಿಗಳು ಚುನಾವಣಾ ಅಧಿಸೂಚನೆಯನ್ನು ಹೊರಡಿಸುವ ದಿನಾಂಕ ಮತ್ತು ದಿನ — 13–01–2015 (ಮಂಗಳವಾರ)
2. ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ — 20–01–2015 (ಮಂಗಳವಾರ)
3. ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ — 21–01–2015 (ಬುಧವಾರ)
4. ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ — 23–01–2015 (ಶುಕ್ರವಾರ)
5. ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ — 01–02–2015 (ಭಾನುವಾರ)
6. ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ — 03–02–2015 (ಮಂಗಳವಾರ)

   (ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ)
7. ಮತಗಳ ಎಣಿಕೆ ದಿನಾಂಕ: **04–02–2015(ಬುಧವಾರ)** ರಂದು ಬೆಳಿಗ್ಗೆ 8.00 ಘಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ)
8. ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯ ಗೊಳಿಸಬೇಕೋ ಆ ದಿನಾಂಕ ಮತ್ತು ದಿನ — 05–02–2015 (ಗುರುವಾರ)

ಜಿಲ್ಲಾಧಿಕಾರಿಗಳು ಆಯೋಗವು ಆದೇಶಿಸಿದ ಚುನಾವಣಾ ವೇಳಾಪಟ್ಟಿಯನ್ನು ಅನುಸರಿಸಿ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು 1993 ರ ನಿಯಮ 12 ರ ಅಡಿಯಲ್ಲಿ ಚುನಾವಣಾ ಅಧಿಸೂಚನೆಯನ್ನು ಹೊರಡಿಸತಕ್ಕದ್ದು. ಹಾಗೂ ಹೊರಡಿಸಲಾದ ಅಧಿಸೂಚನೆಯನ್ನು ಅದೇ ದಿನದಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು. ಪ್ರಕಟಿಸಿದ ಅಧಿಸೂಚನೆ ಪ್ರತಿಗಳನ್ನು ಜಿಲ್ಲಾಧಿಕಾರಿಗಳ ಕಛೇರಿ, ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಗ್ರಾಮ ಪಂಚಾಯತಿ ಕಛೇರಿಯಲ್ಲಿ ಇರುವ ಸೂಚನಾ ಫಲಕದ ಮೇಲೆ ಹಾಗೂ ಇನ್ನಿತರ ಮುಖ್ಯ ಸ್ಥಳಗಳಲ್ಲೂ ಸಹ ಪ್ರದರ್ಶಿಸತಕ್ಕದ್ದು.

ಅಧಿಸೂಚನೆಯ ಪ್ರತಿಯನ್ನು ಅಂದೇ ಚುನಾವಣಾ ಅಧಿಕಾರಿಗಳಿಗೆ ಕಳುಹಿಸಿಕೊಟ್ಟು ಅದೇ ದಿನದಂದು ಚುನಾವಣಾಧಿಕಾರಿಗಳು ಪ್ರಪತ್ರ–3 ರಲ್ಲಿ ಚುನಾವಣಾ ನೋಟೀಸನ್ನು ಪ್ರಕಟಿಸಿ, ಚುನಾವಣಾ ಪ್ರಕ್ರಿಯೆಯನ್ನು ಪ್ರಾರಂಭಿಸುವಂತೆ ಸೂಚಿಸುವುದು ಹಾಗೂ ಚುನಾವಣಾ ನೋಟೀಸಿನಲ್ಲಿ ತೆರವಾಗಿರುವ ಕ್ಷೇತ್ರದ ಹೆಸರು, ಸದಸ್ಯ ಸ್ಥಾನದ ಮೀಸಲಾತಿ ವಿವರಗಳನ್ನು ಸ್ಪಷ್ಟವಾಗಿ ನಮೂದಿಸುವಂತೆ ಸೂಚನೆಗಳನ್ನು ನೀಡತಕ್ಕದ್ದು.

ಚುನಾವಣೆ ನಡೆಯುವ ಕ್ಷೇತ್ರದ ವ್ಯಾಪ್ತಿಯಲ್ಲಿ ಚುನಾವಣಾ ನೀತಿ ಸಂಹಿತೆಯು ದಿ. 13–01–2015 ರಿಂದ 05–02–2015 ರವರೆಗೆ ಜಾರಿಯಲ್ಲಿರುತ್ತದೆ.

ವಿಶೇಷ ಸೂಚನೆ :

1. ಈಗಾಗಲೇ ನೀಡಿರುವ ನಿರ್ದೇಶನಗಳಂತೆ, ಚುನಾವಣೆ ನಡೆಯಲಿರುವ ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿಗೆ ಸಂಬಂಧಿಸಿದಂತೆ ಹಾಲಿ ಚಾಲ್ತಿಯಲ್ಲಿರುವ ವಿಧಾನಸಭಾ ಮತದಾರರ ಪಟ್ಟಿಯನ್ನು ಅಳವಡಿಸಿಕೊಂಡು ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿಯ ಮತದಾರರ ಪಟ್ಟಿಯನ್ನು ಸಿದ್ಧಪಡಿಸಿಕೊಳ್ಳತಕ್ಕದ್ದು.
2. ತೆರವಾಗಿರುವ ಜಿಲ್ಲಾ ಪಂಚಾಯಿತಿ ಕ್ಷೇತ್ರಕ್ಕೆ ಆ ಕ್ಷೇತ್ರ ವ್ಯಾಪ್ತಿಗೆ ಸಂಬಂಧಿಸಿದ ಉಪವಿಭಾಗಾಧಿಕಾರಿಯನ್ನು ಚುನಾವಣಾಧಿಕಾರಿಯನ್ನಾಗಿ ಹಾಗೂ ತಹಶೀಲ್ದಾರ್‌ರನ್ನು ಸಹಾಯಕ ಚುನಾವಣಾಧಿಕಾರಿಯನ್ನಾಗಿ ಮತ್ತು ತೆರವಾಗಿರುವ ತಾಲ್ಲೂಕು ಪಂಚಾಯಿತಿ ಚುನಾವಣಾ ಕ್ಷೇತ್ರಕ್ಕೆ ತಹಶೀಲ್ದಾರ್‌ರನ್ನು ಚುನಾವಣಾಧಿಕಾರಿಯನ್ನಾಗಿ ಹಾಗೂ ಒಬ್ಬರು ಸಹಾಯಕ ಚುನಾವಣಾಧಿಕಾರಿಯನ್ನು ನೇಮಕ ಮಾಡಿ ಅವರಿಗೆ ತರಬೇತಿಯನ್ನು ನೀಡಲು ಸೂಕ್ತ ಕ್ರಮ ವಹಿಸುವುದು ಮತ್ತು ಚುನಾವಣೆಗೆ ಸಂಬಂಧಪಟ್ಟ ಎಲ್ಲಾ ಅಗತ್ಯ ಮಾಹಿತಿ ಹಾಗೂ ಸುತ್ತೋಲೆ/ ನಿರ್ದೇಶನ ಪತ್ರಗಳ ಪ್ರತಿಯನ್ನು ಚುನಾವಣಾಧಿಕಾರಿಗಳಿಗೆ ನೀಡುವುದು.
3. ಮೇಲಿನ ವಿಷಯವನ್ನು ಸಾರ್ವಜನಿಕರ ಮಾಹಿತಿಗಾಗಿ ಸ್ಥಳೀಯ ಪತ್ರಿಕೆಗಳಲ್ಲಿ ಸುದ್ದಿಯಾಗಿ (ವೆಚ್ಚ ಬಾರದಂತೆ) ಪ್ರಕಟಿಸಲು ಸೂಕ್ತ ಕ್ರಮ ತೆಗೆದುಕೊಳ್ಳುವುದು.
4. ಚುನಾವಣೆಗೆ ಸಂಬಂಧಿಸಿದ ವರದಿಯನ್ನು ಆಯೋಗಕ್ಕೆ ತಪ್ಪದೇ ಸಲ್ಲಿಸುವುದು.

ಆದೇಶಾನುಸಾರ
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

ಅನುಬಂಧ

(ಆದೇಶ ಸಂಖ್ಯೆ ರಾಚುಆ: 51 :ಟಿಜಡ್‌ಪಿ: 2014 ದಿನಾಂಕ: 06–01–2015ಕ್ಕೆ ಲಗತ್ತಿಸಲಾಗಿದೆ)

ಉಪ ಚುನಾವಣೆ ನಡೆಯುವ ಜಿಲ್ಲಾ ಪಂಚಾಯಿತಿ ಕ್ಷೇತ್ರಗಳ ವಿವರ

| ಕ್ರ.ಸಂ. | ಜಿಲ್ಲೆ | ತಾಲ್ಲೂಕು | ಜಿಲ್ಲಾ ಪಂಚಾಯಿತಿ ಕ್ಷೇತ್ರ |
|---|---|---|---|
| 1 | ತುಮಕೂರು | ಶಿರಾ | 24–ತಾವರೆಕೆರೆ |
| 2 | ಚಿತ್ರದುರ್ಗ | ಚಳ್ಳಕೆರೆ | 12–ನಾಯಕನಹಟ್ಟಿ |
| 3 | ದಕ್ಷಿಣ ಕನ್ನಡ | ಪುತ್ತೂರು | 29–ಬೆಳಂದೂರು |
| 4 | ಬೆಳಗಾವಿ | ಚಿಕ್ಕೋಡಿ | 38–ಮಾಂಜರಿ |
| 5 | ಕಲಬುರಗಿ | ಆಳಂದ | 13–ಚಿಂಚನಸೂರ |
| 6 | ಕೊಪ್ಪಳ | ಗಂಗಾವತಿ | 19–ಕನಕಗಿರಿ |

ಉಪ ಚುನಾವಣೆ ನಡೆಯುವ ತಾಲ್ಲೂಕು ಪಂಚಾಯಿತಿ ಕ್ಷೇತ್ರಗಳ ವಿವರ

| ಕ್ರ.ಸಂ. | ಜಿಲ್ಲೆ | ತಾಲ್ಲೂಕು | ತಾಲ್ಲೂಕು ಪಂಚಾಯಿತಿ ಕ್ಷೇತ್ರ |
|---|---|---|---|
| 1 | ಬೆಂಗಳೂರು ನಗರ | ಬೆಂಗಳೂರು ಪೂರ್ವ | 02–ಯರಪ್ಪನಹಳ್ಳಿ |
| 2 | ಚಿಕ್ಕಬಳ್ಳಾಪುರ | ಗೌರಿಬಿದನೂರು | 01–ಅಲಕಾಪುರ |
| 3 | ಕೋಲಾರ | ಶ್ರೀನಿವಾಸಪುರ | 17–ಯಲ್ದೂರು |
| 4. | ತುಮಕೂರು | ಶಿರಾ | 01–ತಡಕಲೂರು |
| 5 | ದಾವಣಗೆರೆ | ಹರಪನಹಳ್ಳಿ | 04–ಚಟ್ನಿಹಳ್ಳಿ |
| 6 | ಕೊಪ್ಪಳ | ಕುಷ್ಟಗಿ | 06–ಯರಗೇರಾ |
| 7 | ಕಲಬುರಗಿ | ಅಫಜಲಪೂರ | 07–ಗೊಬ್ಬೂರ(ಬಿ) |
| 8 | ಬಳ್ಳಾರಿ | ಬಳ್ಳಾರಿ | 31–ಗೆಣಿಕೆಹಾಳು |
| 9 | ವಿಜಯಪುರ | ಇಂಡಿ | 12–ಹಲಸಂಗಿ |

ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಬುಧವಾರ, ಜನವರಿ ೦೭, ೨೦೧೫ (ಪುಷ್ಯ ೧೭, ಶಕ ವರ್ಷ ೧೯೩೬) | ನಂ. ೨೦ |
|---|---|---|
| Part– III | Bengaluru, Wednesday, January 07, 2015 (Pushya 17, Shaka Varsha 1936) | No. 20 |

## ಕೃಷಿ ಮಾರಾಟ ಇಲಾಖೆ

### ಅಧಿಸೂಚನೆ

**ಸಂ. ಕೃಮಾಇ:03:ಚುನಾವಣೆ:2014, ಬೆಂಗಳೂರು, ದಿನಾಂಕ : 27–11–2014**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 102 ಹಾಗೂ ನಿಯಮಾವಳಿಗಳು, 1969ರ ನಿಯಮ 88ಐರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ ಡಾ: ಮುದ್ದುಮೋಹನ್ ಆದ ನಾನು, ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸಿರುತ್ತೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರ ಹೆಸರು |
|---|---|---|
| 1 | ಬೆಂಗಳೂರು ಗ್ರಾಮಾಂತರ ಜಿಲ್ಲೆ | ಶ್ರೀ ಕಿ. ರಂಗರಾಜು<br>ಅಧ್ಯಕ್ಷರು<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ<br>ದೊಡ್ಡಬಳ್ಳಾಪುರ |

**ಡಾ: ಮುದ್ದು ಮೋಹನ್**
ನಿರ್ದೇಶಕರು
ಕೃಷಿ ಮಾರುಕಟ್ಟೆ ಇಲಾಖೆ
ಬೆಂಗಳೂರು

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಶುಕ್ರವಾರ, ಜನವರಿ ೯, ೨೦೧೫ (ಪುಷ್ಯ ೧೯, ಶಕ ವರ್ಷ ೧೯೩೬) | ನಂ. ೨೭ |
|---|---|---|
| Part– III | Bangalore, Friday, January 9, 2015 (Pushya 19, Shaka Varsha 1936) | No. 27 |

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 228 ಎಂಎಲ್ಆರ್ 2013, ಬೆಂಗಳೂರು, ದಿನಾಂಕ: 09–01–2015**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3ನೇ ಪ್ರಕರಣದೊಂದಿಗೆ ಓದಿಕೊಂಡ 9ನೇ ಮತ್ತು 355–ಇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಕೆಳಗಿನವುಗಳನ್ನು ಗಮನಿಸಿ, ಅಂದರೆ:–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಅನುಸೂಚಿ ಎ ಮತ್ತು ಅನುಸೂಚಿ ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಮುದಗಲ್ 'ಪಟ್ಟಣ ಪಂಚಾಯತಿ' ಪ್ರದೇಶವನ್ನು 'ಮುದಗಲ್ ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ಮುದಗಲ್ ಪುರಸಭೆ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ

ಮೂವತ್ತು ದಿನಗಳೊಳಗಾಗಿ ಸರ್ಕಾರದ ಉಪಕಾರ್ಯದರ್ಶಿ–2, ನಗರಾಭಿವೃದ್ಧಿ ಇಲಾಖೆ, ಕೊಠಡಿ ಸಂ: 428, 4ನೇ ಮಹಡಿ, ವಿಕಾಸಸೌಧ, ಬೆಂಗಳೂರು, ಇವರಿಗೆ ಸಲ್ಲಿಸಬೇಕೆಂದು ಹಾಗೂ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅನುಸೂಚಿ ಎ**

ಮುದಗಲ್ ಪಟ್ಟಣ

**ಅನುಸೂಚಿ ಬಿ**

ಮುದಗಲ್ ಪಟ್ಟಣವು ಉತ್ತರದಲ್ಲಿ ಸ.ನಂ. 358 ರವರೆಗೆ ಇದರ ಉತ್ತರ–ಪಶ್ಚಿಮ ಭಾಗ ಸಂಖ್ಯೆ (1) ಇದ್ದು, ಛಾವಣಿ–ಲಿಂಗಸೂಗೂರು ರೋಡಿನಿಂದ ಸ.ನಂ. ಗಳು 272, 271:1 ಮತ್ತು 7, 264:1 262:2, 257:1–2 ಮತ್ತು 258:4 259:1 ಉತ್ತರದಲ್ಲಿ ಮುಂದುವರೆದು ಭಾಗ ನಂ. (2) ಇದ್ದು ಛಾವಣಿ–ಲಿಂಗಸೂಗೂರು ರೋಡಿನ ಉತ್ತರ–ಪಶ್ಚಿಮವಾಗಿರುವ ಭಾಗ, ಈ ರೋಡಿಗೆ ಹೊಂದಿರುವ ಅಬಾದಿ ಮುದಗಲ್ಲಿನ ಉತ್ತರದಲ್ಲಿ ಸೋಮವಾರಪೇಟೆ ಕೆರೆ ಇರುವುದು. ಇದರ ಸ.ನಂ.2 ಇರುತ್ತದೆ. ಮುಂದುವರೆದು ಸ.ನಂ. 1ರ ಉತ್ರರ–ಪಶ್ಚಿಮ ಸೀಮೆ ಇದರ ಸರ್ವೆ ನಂಬರುಗಳು 2:2–3, 7:1–2 ಇದು ಭಾಗ ಸಂಖ್ಯೆ (3) ಇದ್ದು ಕಾಚಾಪುರ ರಸ್ತೆಯಲ್ಲಿದೆ. ಸರ್ವೆ ನಂಬರುಗಳು 8 ಮತ್ತು 9ರ ಪಶ್ಚಿಮಕ್ಕೆ ಸ.ನಂ. 10ರ ಉತ್ತರ ಭಾಗದಿಂದ ಸ.ನಂ. 11:1–2 ಮತ್ತು 3 ರಿಂದ 13ರವರೆಗೆ ಮತ್ತು 14:3, 2ರಿಂದ 16, 17:2, 17:1 ಪಶ್ಚಿಮ–ಉತ್ತರ ಭಾಗದ ಸಂಖ್ಯೆ (4) ಇರುವುದು.

ಪಶ್ಚಿಮಕ್ಕೆ ಸ.ನಂ. 17:1ರ ಉತ್ತರ ಪಶ್ಚಿಮ ಭಾಗ ಸಂಖ್ಯೆ (4) ರಿಂದ ದಕ್ಷಿಣಕ್ಕೆ ಬೆಳ್ಳಿಹಾಳ ರಸ್ತೆ ದಾಟುತ್ತಾ ಸ.ನಂ. ಗಳು 590ರ ಪಶ್ಚಿಮದ ಸೀಮೆ ಬಂದು ಸ.ನಂ. 591ರ ಪಶ್ಚಿಮ ಭಾಗ ಇರುವುದು. ಭಾಗ ಸಂಖ್ಯೆ (5) ಬನ್ನಿಗೋಳ ರಸ್ತೆ ಹೊಂದಿ ಸರ್ವೆ ನಂಬರು 595 ರ ಪಶ್ಚಿಮದಿಂದ ಸರ್ವೆ ನಂ. 482ರ ದಕ್ಷಿಣ–ಪಶ್ಚಿಮ ಭಾಗ ಸಂಖ್ಯೆ (6) ರವರೆಗೆ ಇರುತ್ತದೆ. ದಕ್ಷಿಣಕ್ಕೆ ಸ.ನಂ. 482ರಿಂದ ದಕ್ಷಿಣ–ಪಶ್ಚಿಮ ಭಾಗ ಸಂಖ್ಯೆ (8) ಇರುವುದು. ಇದರ ಮುದಗಲ್ ಅಬಾದಿಯಿಂದ ಪಶ್ಚಿಮ–ಪೂರ್ವ ಸ.ನಂ. 627, 481, 480, 478 ರವುಗಳು ಉತ್ತರಕ್ಕೆ ಸ.ನಂ. 277ರ ಪಶ್ಚಿಮ–ದಕ್ಷಿಣ ಭಾಗ ಸಂಖ್ಯೆ (7) ರಿಂದ ಸ.ನಂ. 476ರ ದಕ್ಷಿಣ–ಪೂರ್ವ ಸ.ನಂ. 469, 472:3–1, 462ರ ಉತ್ತರ ಭಾಗ–ಗಂಗಾವತಿ ರಸ್ತೆ ಅಂದರೆ ಸ.ನಂ. 461:1ರ ಉತ್ತರ ಭಾಗದಿಂದ ರೋಡಿಗೆ ಹೊಂದಿ ಸ.ನಂ. 393:2ರ ಉತ್ತರ ಭಾಗವು ಭಾಗ ಸಂಖ್ಯೆ (8) ರಿಂದ ರೋಡಿಗೆ ಹೊಂದಿಕೊಂಡು ಸ.ನಂ. 392 ಮತ್ತು 389 ರಿಂದ ಪಶ್ಚಿಮ ಸೀಮೆ ಸ.ನಂ. 360ರ ದಕ್ಷಿಣ–ಪೂರ್ವ ಮಟ್ಟೂರ ರಸ್ತೆ ದಾಟುತ್ತಾ ಸ.ನಂ. 356ರ ಉತ್ತರ ಪಶ್ಚಿಮ ಭಾಗವು ನಂ. (1) ರವರೆಗೆ ಇರುತ್ತದೆ.

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## URBAN DEVELOPMENT SECRETARIAT

**No. UDD 228 MLR 2013, Bangalore, Dated: 09.01.2015**

**NOTIFICATION**

In exercise of the powers conferred by the section 3 read with section 355(E) of the Karnataka Municipalities Act 1964, the 'Town Panchayat Area of Mudagal' mentioned in Schedule "A" along with boundaries mentioned in Scheduled "B" hereby declared as the "Smaller Urban Area" of Mudagal and further specify such area to be the "Town Municipal Area" of Mudagal with effect from the date of publishing this Notification in the Official Gazette by the Governor of Karnataka having regard to:

i. The population of such area is not less than twenty thousand and not more than three lakhs;

ii. The density of population in such area is not less than one thousand five hundred inhabitants to one square kilometer of area;

iii. The revenue generated for local administration from such area from tax and non-tax sources in the year of the last preceding census is not less than rupees nine lakhs per annum or a sum calculated at the rate of rupees forty five per capita per annum, whichever is higher;

iv. The percentage of employment in non-agricultural activities is not less than fifty per cent of the total employment;

The notification is hereby published for the information of the persons likely to be affected thereby and the information is hereby by given that the notification will be taken in to consideration after 30 days from the date of the publication of this notification in the official gazette.

All the persons, who likely to file any objections/suggestions to the said notifications are hereby required to submit the same with reasons therefore in writing to the Deputy Secretary-2 to Government, Urban Development Department, No.428, 4th Floor, Vikasa Soudha, Bangalore.

By Order and in the name of the Governor of Karnataka

**SIDDIQ PASHA**

Under Secretary to Government

Urban Development Department

**SCHEDULE-A**

Mudagal Town

**SCHEDULE – B**

The boundary of Mudagal Town starts from towards North upto Sy.No. 358 and from towards North-West part (1), from Chavani-Lingasugur Road, Sy.Nos. 272, 271/1 and 7, 264/1, 262/2, 257/1-2 and 258/4, 259/1 continuing towards North part (2) of Chavani-Lingasugur Road attached to this Road Somawarpet tank is lying towards North. The Sy.No. of this 2. Continuing towards North-West of Sy.Nos. 1, 2/2-3, 7/1-2. This being part No. (3) Kachapuru Road. Sy.No. 8 and 9 towards North-West Sy.No.10 and towards Southwards Sy.No. 11/1-2 and 3 upto 13 and 14/3 from Sy. Nos. 2 to 16, 17/2, 17/1 towards West-North part No. (4).

From Part No. (4) of North-West part of Sy.No. 17/1 towards South, crossing Bellihal Road, Sy.No. 590 to West of this boundary part of Sy.No. 591, part (5) attached to Bannigola Road from West Sy.Nos. 595, Sy.No. from 482 South-West upto Part No. (6) towards South from Sy.No. 482 South-West part No. (8) is lying and from towards West-East Sy.Nos. 627, 481, 480, 478 towards North Sy.No. 277, West-South part No. (7) and from this, Sy.No. 476 South-East Sy.Nos. 469, 472/3-1, Northern part of 462 and from Gangavathi Road of Sy.No. 461/1 towards Northern part attached to Road Sy.No. 393/2 upto part No. (8) Sy.No. 393/2 Northern part of part No. (8) and from this attached to Road Sy.No. 392 and from Sy.No. 389 towards Western line crossing Mattur Road of Sy.No. 360 of South-East Sy.No. 356 and to the North-West upto part No. (1).

**SIDDIQ PASHA**

Under Secretary to Government

Urban Development Department

# ವಿಶೇಷ ರಾಜ್ಯ ಪತ್ರಿಕೆ


| ಭಾಗ– III | ಬೆಂಗಳೂರು, ಮಂಗಳವಾರ, ಜನವರಿ ೧೩, ೨೦೧೫ (ಪುಷ್ಯ ೨೩, ಶಕ ವರ್ಷ ೧೯೩೬) | ನಂ. ೩೫ |
|---|---|---|
| Part– III | Bengaluru, Tuesday, January 13, 2015 (Pushya 23, Shaka Varsha 1936) | No. 35 |


**ಜಿಲ್ಲಾಧಿಕಾರಿಯವರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು.**

**ನಂ. ಚು(2)ವಿವ/12/2014–15, ದಿನಾಂಕ:13–01–2015**

**ಪ್ರಪತ್ರ–1**

**(12(2)ನೇ ನಿಯಮವನ್ನು ನೋಡಿ)**

**ಅಧಿಸೂಚನೆ**

1993ರ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ಕೆಳಕಾಣಿಸಿದ **24–ತಾವರೆಕೆರೆ ಜಿಲ್ಲಾ ಪಂಚಾಯತ್ ಕ್ಷೇತ್ರ ಮತ್ತು 1–ತಡಕಲೂರು ತಾಲ್ಲೂಕು ಪಂಚಾಯತ್ ಕ್ಷೇತ್ರದಲ್ಲಿ ಖಾಲಿ ಇರುವ** ಸದಸ್ಯ ಸ್ಥಾನವನ್ನು ಕೋಷ್ಟಕದ (4)ನೇ ಅಂಕಣದಲ್ಲಿ ನಮೂದಿಸಿದ ಮೀಸಲಾತಿಗನುಸಾರ ತುಂಬಲು ಉಪ ಚುನಾವಣೆ ನಡೆಸಬೇಕಾಗಿರುವುದರಿಂದ;

ಕರ್ನಾಟಕ ಪಂಚಾಯತ್‌ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು 1993ರ ನಿಯಮ 12ರ ಅನುಸಾರ ಮತ್ತು ರಾಜ್ಯ ಚುನಾವಣಾ ಆಯೋಗದ ನಂ. ರಾಚುಆ 51 ಟಿಜಡ್‌ಪಿ 2014, ದಿನಾಂಕ : 07–01–2015 ರ ಆದೇಶದ ಮೇರೆಗೆ ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿ ಕೆ.ಎಸ್.ಸತ್ಯಮೂರ್ತಿ, ಭಾ.ಆ.ಸೇ., ಆದ ನಾನು ಸದರಿ ಉಪಚುನಾವಣೆಗೆ ಸಂಬಂಧಿಸಿದಂತೆ ಈ ಕೆಳಕಾಣಿಸಿದ ಚುನಾವಣಾ ವೇಳಾ ಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿರುತ್ತೇನೆ.

| | | |
|---|---|---|
| 1) | ಚುನಾವಣಾಧಿಕಾರಿಗಳು ಪ್ರಪತ್ರ–3ರಲ್ಲಿ ಚುನಾವಣಾ ನೋಟೀಸ್ ಹೊರಡಿಸುವ ದಿನಾಂಕ ಮತ್ತು ದಿನ | 13–01–2015 (ಮಂಗಳವಾರ) |
| 2) | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 20–01–2015 (ಮಂಗಳವಾರ) |
| 3) | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 21–01–2015 (ಬುಧವಾರ) |
| 4) | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 23–01–2015 (ಶುಕ್ರವಾರ) |
| 5) | ಮತದಾನ ಅವಶ್ಯವಿದ್ದರೆ ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಗ್ಗೆ 7.00 ಗಂಟೆ ಯಿಂದ ಸಾಯಂಕಾಲ 5.00 ಗಂಟೆಯವರೆಗೆ) | 01–02–2015 (ಭಾನುವಾರ) |
| 6) | ಮರು ಮತದಾನ ಅವಶ್ಯವಿದ್ದಲ್ಲಿ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮರು ಮತದಾನದ ಸಮಯ ಬೆಳಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ) | 03–02–2015 (ಮಂಗಳವಾರ) |
| 7) | ಮತಗಳ ಎಣಿಕೆಯು ದಿನಾಂಕ 04–02–2015 (ಬುಧವಾರ) ರಂದು ಬೆಳಗ್ಗೆ 8–00 ಗಂಟೆಯಿಂದ (ತಾಲ್ಲೂಕಿನ ಕೇಂದ್ರಸ್ಥಳದಲ್ಲಿ) | |
| 8) | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05–02–2015 |

**ಕೋಷ್ಟಕ**

| ಕ್ರ. ಸಂ. | ತಾಲ್ಲೂಕು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಸ್ಥಾನಗಳನ್ನು ಮೀಸಲಿರಿಸಿದ ಪ್ರವರ್ಗ |
|---|---|---|---|
| 1 | 2 | 3 | 4 |
| **ಜಿಲ್ಲಾ ಪಂಚಾಯತಿ** | | | |
| 1. | ಶಿರಾ | **24–ತಾವರೆಕೆರೆ** | ಸಾಮಾನ್ಯ |
| **ತಾಲ್ಲೂಕು ಪಂಚಾಯತಿ** | | | |
| 1. | ಶಿರಾ | **1–ತಡಕಲೂರು** | ಪರಿಶಿಷ್ಟ ಜಾತಿ |

**ಕೆ.ಎಸ್. ಸತ್ಯಮೂರ್ತಿ**
ಜಿಲ್ಲಾಧಿಕಾರಿಗಳು,
ತುಮಕೂರು ಜಿಲ್ಲೆ.

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಮಂಗಳವಾರ, ಜನವರಿ ೧೩, ೨೦೧೫ (ಪುಷ್ಯ ೨೩, ಶಕ ವರ್ಷ ೧೯೩೬) | ನಂ. ೩೬ |
|---|---|---|
| Part– III | Bengaluru, Tuesday, January 13, 2015 (Pushya 23, Shaka Varsha 1936) | No. 36 |

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ,**
**ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ**

**ಪ್ರಪತ್ರ–1**

**(12 (2)ನೇ ನಿಯಮವನ್ನು ನೋಡಿ)**

**ಅಧಿಸೂಚನೆ**

**ಸಂಖ್ಯೆ: ಇಎಲ್ಎನ್(2)/ಸಿಆರ್/25/2014–15, ದಿನಾಂಕ: 13/01/2015.**

1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ **ಚಿಕ್ಕಬಳ್ಳಾಪುರ ಜಿಲ್ಲೆಗೆ** ಸಂಬಂಧಿಸಿದಂತೆ **ಗೌರಿಬಿದನೂರು ತಾಲ್ಲೂಕು ಪಂಚಾಯಿತಿಯ ಅಲಕಾಪುರ ಚುನಾವಣಾ ಕ್ಷೇತ್ರದಿಂದ** ವಿವಿಧ ಕಾರಣದಿಂದ ತೆರವಾದ ಚುನಾಯಿತ ಸದಸ್ಯರ ಸ್ಥಾನವನ್ನು ತುಂಬಲು

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12 (2)ನೇ ನಿಯಮಕ್ಕೆ ಅನುಸಾರವಾಗಿ ಚಿಕ್ಕಬಳ್ಳಾಪುರ ಜಿಲ್ಲೆಯ **ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳಾದ ಡಾ॥ ಎಂ.ವಿ.ವೆಂಕಟೇಶ್, ಭಾ.ಆ.ಸೇ,** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

| ಕ್ರ. ಸಂ | ಚುನಾವಣಾ ವೇಳಾಪಟ್ಟಿ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 20/01/2015 ಮಂಗಳವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 21/01/2015 ಬುಧವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 23/01/2015 ಶುಕ್ರವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 01/02/2015 ಭಾನುವಾರ |
| 5. | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ) | 03/02/2015 ಮಂಗಳವಾರ |
| 6. | ಮತಗಳ ಎಣಿಕೆಯ ದಿನಾಂಕ ಮತ್ತು ದಿನ ಬೆಳಿಗ್ಗೆ 8.00 ಘಂಟೆಯಿಂದ ತಾಲ್ಲೂಕು ಕೇಂದ್ರ ಸ್ಥಳದಲ್ಲಿ | 04/02/2015 ಬುಧವಾರ |
| 7. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05/02/2015 ಗುರುವಾರ |

**ಪ್ರಪತ್ರ 1ರ ಅನುಬಂಧ**

**ಉಪ ಚುನಾವಣೆ ನಡೆಯುವ ತಾಲ್ಲೂಕು ಪಂಚಾಯಿತಿ ಕ್ಷೇತ್ರದ ವಿವರ**

| ಕ್ರ.ಸಂ | ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಸ್ಥಾನಗಳ ಸಂಖ್ಯೆ | ಮೀಸಲಾತಿ ಪ್ರವರ್ಗ |
|---|---|---|---|
| 1. | 01–ಅಲಕಾಪುರ | ಒಂದು | ಸಾಮಾನ್ಯ (ಮಹಿಳೆ) |

**ಡಾ॥ ಎಂ.ವಿ.ವೆಂಕಟೇಶ್, ಭಾ.ಆ.ಸೇ,**
ಜಿಲ್ಲಾಧಿಕಾರಿಗಳು,
ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು,
ಚಿಕ್ಕಬಳ್ಳಾಪುರ ಜಿಲ್ಲೆ.

# ವಿಶೇಷ ರಾಜ್ಯ ಪತ್ರಿಕೆ



| ಭಾಗ– III | ಬೆಂಗಳೂರು, ಮಂಗಳವಾರ, ಜನವರಿ ೧೩, ೨೦೧೫ (ಪುಷ್ಯ ೨೩, ಶಕ ವರ್ಷ ೧೯೩೬) | ನಂ. ೩೭ |
|---|---|---|
| Part– III | Bengaluru, Tuesday, January 13, 2015 (Pushya 23, Shaka Varsha 1936) | No. 37 |



## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ಪ್ರಪತ್ರ – 1**

**(12(2)ನೇ ನಿಯಮವನ್ನು ನೋಡಿ)**

**(ತಾಲ್ಲೂಕು ಪಂಚಾಯಿತಿಗಳು ಮತ್ತು ಜಿಲ್ಲಾ ಪಂಚಾಯಿತಿಗಳ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಿಸುವುದಕ್ಕಾಗಿ)**

**ಅಧಿಸೂಚನೆ**

**ಸಂ.ಇಎಲ್‌ಎನ್(2)ಸಿಆರ್/30/2014–15 ದಿನಾಂಕ 13/01/2015**

(1) 1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ಕೋಲಾರ ಜಿಲ್ಲೆಗೆ ಸಂಬಂಧಿಸಿದಂತೆ, ಶ್ರೀನಿವಾಸಪುರ ತಾಲ್ಲೂಕು ಪಂಚಾಯಿತಿಯ ಈ ಅಧಿಸೂಚನೆಯ ತ:ಖ್ತೆಯಲ್ಲಿ ನಮೂದಿಸಿರುವ ಚುನಾವಣಾ ಕ್ಷೇತ್ರದಿಂದ ಶ್ರೀನಿವಾಸಪುರ ತಾಲ್ಲೂಕು ಪಂಚಾಯ್ತಿಗೆ ಚುನಾಯಿತ ಸದಸ್ಯರ ಸ್ಥಾನವನ್ನು ತುಂಬಲು,

(2) ಶ್ರೀಮತಿ.ಜಿ.ಕೆ.ಪುಷ್ಪ, ಸದಸ್ಯ ರವರ ರಾಜೀನಾಮೆಯಿಂದಾಗಿ ಇವರ ಸ್ಥಾನವನ್ನು ಖಾಲಿಯಾಗಿರುವುದರಿಂದ ಉಂಟಾದ ಖಾಲಿ ಸದಸ್ಯ ಸ್ಥಾನವನ್ನು ತುಂಬಲು ಚುನಾವಣೆಯನ್ನು ನಡೆಸಬೇಕಾಗಿರುವುದರಿಂದ,

ಆದುದರಿಂದ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993 ರ 12ನೇ ನಿಯಮಕ್ಕನುಸಾರವಾಗಿ ಕೋಲಾರ ಜಿಲ್ಲೆಯ ಡೆಪ್ಯುಟಿ ಕಮೀಷನರ್‌ರಾದ **ಡಾ:ಕೆ.ವಿ.ತ್ರಿಲೋಕ್‌ಚಂದ್ರ, ಭಾ.ಆ.ಸೇ.** ಎಂಬ ಹೆಸರಿನ ನಾನು, ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾ ಪಟ್ಟಿಯನ್ನು ಈ ಮೂಲಕ ನಿಗಧಿಪಡಿಸುತ್ತೇನೆ.

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| (ಎ) ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | : | 20-01-2015 (ಮಂಗಳವಾರ) |
| (ಬಿ) ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | : | 21-01-2015 (ಬುಧವಾರ) |
| (ಸಿ) ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ. | : | 23-01-2015 (ಶುಕ್ರವಾರ) |
| (ಡಿ) ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ ಮತ್ತು ಮತದಾನ ಸಮಯ | : | 01-02-2015 (ಭಾನುವಾರ)<br>ಬೆಳಿಗ್ಗೆ 7-00 ಗಂಟೆಯಿಂದ<br>ಸಂಜೆ 5-00 ಗಂಟೆಯವರೆಗೆ |
| (ಇ) ಮತಗಳ ಎಣಿಕೆ ದಿನಾಂಕ, ದಿನ, ಸ್ಥಳ ಮತ್ತು ಸಮಯ | : | 04-02-2015 (ಬುಧವಾರ)<br>ಬೆಳಿಗ್ಗೆ 8-00 ಗಂಟೆಯಿಂದ<br>ತಾಲ್ಲೂಕಿನ ಕೇಂದ್ರಸ್ಥಾನದಲ್ಲಿ |
| (ಎಫ್) ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯ ಗೊಳಿಸಬೇಕೋ ಆ ದಿನಾಂಕ ಮತ್ತು ದಿನ. | : | 05-02-2015 (ಗುರುವಾರ) |

**ಡಾ: ಕೆ.ವಿ. ತ್ರಿಲೋಕ್‌ಚಂದ್ರ**
ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ.

**ತ:ಖ್ತೆ**

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಸಂ.ಇಎಲ್ಎನ್(2)ಸಿಆರ್/30/2014-15 ದಿನಾಂಕ 13/01/2015**

ಕೋಲಾರ ಜಿಲ್ಲೆಯ ಶ್ರೀನಿವಾಸಪುರ ತಾಲ್ಲೂಕು ಪಂಚಾಯಿತಿಯಲ್ಲಿ ಸದಸ್ಯರ ರಾಜೀನಾಮೆಯಿಂದ ತೆರವಾಗಿರುವ ತಾಲ್ಲೂಕು ಪಂಚಾಯಿತಿಯ ಸದಸ್ಯ ಸ್ಥಾನಗಳಿಗೆ ಉಪ ಚುನಾವಣೆಯನ್ನು ನಡೆಸಲು ವೇಳಾ ಪಟ್ಟಿಯನ್ನು ನಿಗಧಿಪಡಿಸಿದೆ.

| ಕ್ರ. ಸಂ. | ತಾಲ್ಲೂಕಿನ ಹೆಸರು | ತಾಲ್ಲೂಕು ಪಂಚಾಯತಿಯ ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಸ್ಥಾನಗಳ ಸಂಖ್ಯೆ | ಸದಸ್ಯ ಸ್ಥಾನ ತೆರವಾಗಲು ಕಾರಣ | ಮೀಸಲಾತಿ ವಿವರ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಶ್ರೀನಿವಾಸಪುರ | ಶ್ರೀನಿವಾಸಪುರ ತಾಲ್ಲೂಕು ಪಂಚಾಯಿತಿ | 17-ಯಲ್ದೂರು | 1 (ಒಂದು) | ಶ್ರೀಮತಿ.ಜಿ.ಕೆ.ಪುಷ್ಪ ರವರ ರಾಜೀನಾಮೆಯಿಂದ ತೆರವಾಗಿರುತ್ತದೆ. | ಸಾಮಾನ್ಯ (ಮ) |

**ಡಾ :ಕೆ.ವಿ. ತ್ರಿಲೋಕ್‌ಚಂದ್ರ**
ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ.

# ವಿಶೇಷ ರಾಜ್ಯ ಪತ್ರಿಕೆ



| ಭಾಗ– III | ಬೆಂಗಳೂರು, ಮಂಗಳವಾರ, ಜನವರಿ ೧೩, ೨೦೧೫ (ಪುಷ್ಯ ೨೩, ಶಕ ವರ್ಷ ೧೯೩೬) | ನಂ. ೩೮ |
|---|---|---|
| **Part– III** | **Bengaluru, Tuesday, January 13, 2015 (Pushya 23, Shaka Varsha 1936)** | **No. 38** |



## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪ್ರಪತ್ರ–1**

[12(2) ನೇ ನಿಯಮವನ್ನು ನೋಡಿ]

**ಅಧಿಸೂಚನೆ**

**ಚುನಾವಣೆ. ಸಿ.ಆರ್.127/2014–15, ದಿನಾಂಕ: 13.01.2015**

1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ಜಿಲ್ಲಾ ಪಂಚಾಯತ್‌ನ ನಂ.12 ನಾಯಕನಹಟ್ಟಿ ಕ್ಷೇತ್ರದ ಶ್ರೀಮತಿ ಜಯಮ್ಮ ಕೋಂ ಬಾಲರಾಜುರವರ ರಾಜೀನಾಮೆಯಿಂದ ತೆರವಾದ ಸ್ಥಾನಕ್ಕೆ ಚುನಾಯಿತ ಸದಸ್ಯರ ಸ್ಥಾನ ತುಂಬಲು ಚುನಾವಣೆಯನ್ನು ನಡೆಸಬೇಕಾಗಿರುತ್ತದೆ.

ಆದುದರಿಂದ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕೆ ಅನುಸಾರವಾಗಿ ಚಿತ್ರದುರ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳಾದ **ಎಂ.ಕೆ.ಶ್ರೀರಂಗಯ್ಯ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

| | | |
|---|---|---|
| 1 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 20.01.2015 (ಮಂಗಳವಾರ) |
| 2 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 21.01.2015 (ಬುಧವಾರ) |
| 3 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ | 23.01.2015 (ಶುಕ್ರವಾರ) |
| 4 | ಮತದಾನ ಅವಶ್ಯವಿದ್ದರೆ ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 01.02.2015 (ಭಾನುವಾರ) |
| 5 | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 03.02.2015 (ಮಂಗಳವಾರ) |
| | (ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ) | |
| 6 | ಮತಗಳ ಎಣಿಕೆ ದಿನಾಂಕ:04.02.2015(ಬುಧವಾರ)ರಂದು ಬೆಳಿಗ್ಗೆ 8.00 ಘಂಟೆಯಿಂದ | (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) |
| 7 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05.02.2015 (ಗುರುವಾರ) |

**ಎಂ.ಕೆ. ಶ್ರೀರಂಗಯ್ಯ**
ಜಿಲ್ಲಾಧಿಕಾರಿಗಳು
ಚಿತ್ರದುರ್ಗ ಜಿಲ್ಲೆ

# ವಿಶೇಷ ರಾಜ್ಯ ಪತ್ರಿಕೆ



| ಭಾಗ– III | ಬೆಂಗಳೂರು, ಮಂಗಳವಾರ, ಜನವರಿ ೧೩, ೨೦೧೫ (ಪುಷ್ಯ ೨೩, ಶಕ ವರ್ಷ ೧೯೩೬) | ನಂ. ೩೯ |
|---|---|---|
| **Part– III** | **Bangalore, Tuesday, January 13, 2015 (Pushya 23, Shaka Varsha 1936)** | **No. 39** |



## ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪ್ರಪತ್ರ–1**

[12(2) ನೇ ನಿಯಮವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ ರಾಚು ಸಿಆರ್.2/2014–15, ದಿನಾಂಕ : 13–01–2015**

1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ದಾವಣಗೆರೆ ಜಿಲ್ಲೆ **ಹರಪನಹಳ್ಳಿ ತಾಲ್ಲೂಕಿನ** 4. ಚಟ್ನಿಹಳ್ಳಿ (ಸಾಮಾನ್ಯ) ತಾಲ್ಲೂಕು ಪಂಚಾಯತಿ ಕ್ಷೇತ್ರದ ಸದಸ್ಯರಾದ ಶ್ರೀ ಬಿ.ಮಹೇಶಪ್ಪ ಇವರ ಮರಣದಿಂದ ತೆರವಾಗಿರುವ ಸದಸ್ಯ ಸ್ಥಾನವನ್ನು ತುಂಬಲು ಉಪ ಚುನಾವಣೆ ನಡೆಸಬೇಕಾಗಿದೆ.

ಆದುದರಿಂದ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ **ದಾವಣಗೆರೆ ಜಿಲ್ಲೆಯ ಜಿಲ್ಲಾಧಿಕಾರಿಯಾದ ಎಸ್.ಟಿ. ಅಂಜನ್‌ಕುಮಾರ್** ಎಂಬ ಹೆಸರಿನ ನಾನು ಸದರಿ ಉಪ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

| | | |
|---|---|---|
| (ಎ) | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | **20–01–2015 (ಮಂಗಳವಾರ)** |
| (ಬಿ) | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | **21–01–2015 (ಬುಧವಾರ)** |
| (ಸಿ) | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | **23–01–2015 (ಶುಕ್ರವಾರ)** |
| (ಡಿ) | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ, ದಿನ ಮತ್ತು ಸಮಯ | **01–02–2015 (ಭಾನುವಾರ) ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆಯವರೆಗೆ** |
| (ಇ) | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | **05–02–2015 (ಗುರುವಾರ)** |

**ಎಸ್.ಟಿ. ಅಂಜನ್‌ಕುಮಾರ್**
ಜಿಲ್ಲಾಧಿಕಾರಿ,
ದಾವಣಗೆರೆ ಜಿಲ್ಲೆ.

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– III | ಬೆಂಗಳೂರು, ಮಂಗಳವಾರ, ಜನವರಿ ೧೩, ೨೦೧೫ (ಪುಷ್ಯ ೨೩, ಶಕ ವರ್ಷ ೧೯೩೬) | ನಂ. ೪೦ |
| Part– III | Bengaluru, Tuesday, January 13, 2015 (Pushya 23, Shaka Varsha 1936) | No. 40 |

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು ಬೆಂಗಳೂರು ಜಿಲ್ಲೆ, ಬೆಂಗಳೂರು.**

**ಪ್ರಪತ್ರ–1**

**(12 (2) ನೇ ನಿಯಮವನ್ನು ನೋಡಿ)**

**(ತಾಲ್ಲೂಕು ಪಂಚಾಯತಿಗಳ ಉಪ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)**

**ಅಧಿಸೂಚನೆ**

**ಸಂಖ್ಯೆ:ಚುನಾ(ತಾ.ಪಂ)(ಉ.ಚು)ಸಿಆರ್:01:2014–15, ದಿನಾಂಕ: 13–01–2015.**

(1) 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ಬೆಂಗಳೂರು ನಗರ ಜಿಲ್ಲೆಗೆ ಸಂಬಂಧಿಸಿದಂತೆ, ಬೆಂಗಳೂರು ಪೂರ್ವ ತಾಲ್ಲೂಕು ಪಂಚಾಯಿತಿಯ ಈ ಅಧಿಸೂಚನೆಯ ತಃಖ್ತೆಯಲ್ಲಿ ನಮೂದಿಸಿರುವ ಚುನಾವಣಾ ಕ್ಷೇತ್ರದಿಂದ ಬೆಂಗಳೂರು ಪೂರ್ವ ತಾಲ್ಲೂಕು ಪಂಚಾಯಿತಿಗೆ ಚುನಾಯಿತ ಸದಸ್ಯರ ಸ್ಥಾನವನ್ನು ತುಂಬಲು,

(2) ಸದಸ್ಯರ ನಿಧನದಿಂದ ಸ್ಥಾನವು ಖಾಲಿಯಾಗಿರುವುದಾಗಿ ಘೋಷಿಸಿರುವುದರಿಂದಾಗಿ ಉಂಟಾದ ಖಾಲಿ ಸದಸ್ಯ ಸ್ಥಾನವನ್ನು ತುಂಬಲು ಚುನಾವಣೆಯನ್ನು ನಡೆಸಬೇಕಾಗಿರುವುದರಿಂದ,

ಆದುದರಿಂದ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ಕಲಂ.ನ ಅನುಸಾರ ದತ್ತವಾದ ಅಧಿಕಾರದ ಮೇರೆಗೆ **ವಿ.ಶಂಕರ್, ಭಾ.ಆ.ಸೇ.**, ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಆದ ನಾನು, ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

**: : ಚುನಾವಣಾ ವೇಳಾಪಟ್ಟಿ : :**

| | | |
|---|---|---|
| ಎ) | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | ದಿನಾಂಕ: 20–01–2015 (ಮಂಗಳವಾರ) |
| ಬಿ) | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | ದಿನಾಂಕ: 21–01–2015 (ಬುಧವಾರ) (ಬೆಳಿಗ್ಗೆ 11.00 ಗಂಟೆಗೆ) |
| ಸಿ) | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | ದಿನಾಂಕ: 23–01–2015 (ಶುಕ್ರವಾರ) (ಮಧ್ಯಾಹ್ನ 3.00 ಗಂಟೆವರೆಗೆ) |

ಈ ಅಧಿಸೂಚನೆಯಿಂದ ಬಾಧಿತರಾದವರು ದಿನಾಂಕ: **29/01/2015** ರೊಳಗಾಗಿ ಕಛೇರಿ ವೇಳೆಯಲ್ಲಿ ಸಲಹೆ ಮತ್ತು ಆಕ್ಷೇಪಣೆಗಳನ್ನು ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇಲ್ಲಿಗೆ ಸಲ್ಲಿಸಲು ಅವಕಾಶವನ್ನು ನೀಡಲಾಗಿದೆ. ದಿನಾಂಕ: **29/01/2015** ರ ನಂತರ ಸಲ್ಲಿಸುವ ಸಲಹೆ ಮತ್ತು ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ, ಎಂಬ ಮಾಹಿತಿಯನ್ನು ಸಾರ್ವಜನಿಕರಿಗೆ ತಿಳಿಸಲಾಗಿದೆ.

| ಕ್ರ.ಸಂ | ಗ್ರಾಮ ಪಂಚಾಯಿತಿ ಹೆಸರು | ಗ್ರಾಮ ಪಂಚಾಯಿತಿಗೆ ಒಳಪಡುವ ಗ್ರಾಮಗಳು | ಷರಾ |
|---|---|---|---|
| ತಾಲ್ಲೂಕು : ಶಿವಮೊಗ್ಗ | | | |
| 1 | ಕೊನಗವಳ್ಳಿ | ಕೊನಗವಳ್ಳಿ | |
| | | ಹೊಸೂರು | |
| | | ಸೇವಾಲಾಲ್ ನಗರ | |
| | | ವಾಲ್ಕೇಶವಪುರ | |
| | | ಎರೇಕೊಪ್ಪ | |
| | | ತ್ಯಾಜವಳ್ಳಿ | |
| | | ಅಂಬ್ಲಿಕಟ್ಟೆ(ಬೇ*) | |
| | | ದೇವಬಾಳು | |
| | | ಮದುವಾಲ | |
| | | ಯಡವಾಲ | |
| | | ಮೈಸವಳ್ಳಿ | |
| 2 | ಆಯನೂರು | ಆಯನೂರು | |
| | | ವೀರಣ್ಣನ ಬೆನವಳ್ಳಿ | |
| | | ಚನ್ನಹಳ್ಳಿ | |
| | | ಸಿದ್ದಾಪುರ (ಬೇ*) | |
| | | ಶೆಟ್ಟಿಕೊಪ್ಪ (ಬೇ*) | |
| | | ಹೊಸೂರು | |
| | | ಯಲವಳ್ಳಿ | |
| | | ಸೋಮಕೊಪ್ಪ (ಬೇ*) | |
| 3 | ಕೋಹಳ್ಳಿ | ದೊಡ್ಡದಾನವಂದಿ | |
| | | ಡಗಳಿಮನೆ | |
| | | ಕೋಹಳ್ಳಿ | |
| | | ವೀರಗಾರನಬೈರನಕೊಪ್ಪ | |
| | | ಆನೇಸರ | |
| 4 | ಸಿರಿಗೆರೆ | ಸಿರಿಗೆರೆ | |
| | | ಇಟ್ಟಿಗೆಹಳ್ಳಿ | |
| | | ಬಿಲ್ ವಡೆಯರಕೊಪ್ಪ | |
| | | ಮಲೇಶಂಕರ | |
| | | ಮಳಲಿಕೊಪ್ಪ (ಬೇ*) | |
| | | ಚಿಟ್ಟಿಹಾಳ್(ಬೇ*) | |
| 5 | ಮೇಲಿನಹನಸವಾಡಿ | ಮೇಲಿನಹನಸವಾಡಿ | |
| | | ಬೆಳಲಕಟ್ಟೆ | |
| | | ಗೋಂದಿಚಟ್ನಳ್ಳಿ | |
| | | ಗೊರವಿನಕಟ್ಟೆ (ಬೇ*) | |
| 6 | ಬೇಡರಹೊಸಳ್ಳಿ | ಬೇಡರಹೊಸಳ್ಳಿ | |
| | | ಬುಳ್ಳಾಪುರ | |
| | | ಹೊಳೆಹನಸವಾಡಿ | |

| ಕ್ರ.ಸಂ | ಗ್ರಾಮ ಪಂಚಾಯಿತಿ ಹೆಸರು | ಗ್ರಾಮ ಪಂಚಾಯಿತಿಗೆ ಒಳಪಡುವ ಗ್ರಾಮಗಳು | ಷರಾ |
|---|---|---|---|
| 7 | ಚೋರಡಿ | ಚೋರಡಿ | |
| | | ಗಂಡೂರ | |
| | | ಶೆಟ್ಟಿಕೆರೆ | |
| | | ಶಾಂತಿಕೆರೆ | |
| | | ವಡೆಯರಕೊಪ್ಪ | |
| | | ದೊಡ್ಡಿಮಟ್ಟಿ (ಬೇ*) | |
| | | ಚೋಡನಾಳ್ (ಬೇ*) | |
| | | ಬ್ಯಾಡನಾಳ್ (ಬೇ*) | |
| 8 | ತುಪ್ಪೂರು | ತುಪ್ಪೂರು | |
| | | ಆಲ್ಕೊಣಿ | |
| | | ಸನ್ನಿವಾಸ | |
| | | ಕೋಣೆಹೊಸೂರು | |
| | | ಕೊರಗಿ | |
| | | ಹೊರಬೈಲು | |
| 9 | ಸಂತೆಕಡೂರು | ಸಂತೆಕಡೂರು | |
| | | ರಾಂಪುರ | |
| 10 | ಸೋಗಾನೆ | ಸೋಗಾನೆ | |
| 11 | ಕೋಟೆಗಂಗೂರು | ಕೋಟೆಗಂಗೂರು | |
| | | ದೇವಕಾತಿಕೊಪ್ಪ | |
| | | ಬೈರನಕೊಪ್ಪ | |
| | | ಗೆಜ್ಜೇನಹಳ್ಳಿ | |
| 12 | ಮುದ್ದಿನಕೊಪ್ಪ | ಮುದ್ದಿನಕೊಪ್ಪ | |
| | | ಸಿದ್ಲೀಪುರ | |
| | | ವಿರೂಪನಕೊಪ್ಪ | |
| | | ಶ್ರೀರಾಂಪುರ | |
| ತಾಲ್ಲೂಕು: ಭದ್ರಾವತಿ | | | |
| 1 | ಅರಬಿಳಚಿ | ಅರಬಿಳ್ಳಚಿ | |
| 2 | ಕೂಡ್ಲಿಗೆರೆ | ಕೂಡ್ಲಿಗೆರೆ | |
| | | ಕೊಟ್ಟದಾಳು (ಬೇ*) | |
| | | ನವಿಲೆಬಸವಾಪುರ (ಬೇ*) | |
| | | ಹಾಳುಮಲ್ಲಾಪುರ (ಬೇ*) | |
| | | ಕಲ್ಪನಹಳ್ಳಿ | |
| | | ಕೋಡಿಹಳ್ಳಿ | |
| 3 | ಸಿದ್ಲೀಪುರ | ಸಿದ್ಲೀಪುರ | |
| | | ಡಣಾಯಕಪುರ | |
| 4 | ಸನ್ಯಾಸಿಕೋಡಮಗ್ಗೆ | ಸನ್ಯಾಸಿಕೋಡಮಗ್ಗೆ | |
| | | ಕನಸಿನಕಟ್ಟೆ | |
| 5 | ಅರಹತೊಳಲು | ಅರಹತೊಳಲು | |
| 6 | ಹನುಮಂತಾಪುರ | ಹನುಮಂತಾಪುರ | |
| | | ಜಂಬರಗಟ್ಟ | |
| ತಾಲ್ಲೂಕು: ತೀರ್ಥಹಳ್ಳಿ | | | |
| 1 | ಭಾಂದ್ಯಕುಕ್ಕೆ | ಭಾಂದ್ಯ | |

| ಕ್ರ.ಸಂ | ಗ್ರಾಮ ಪಂಚಾಯಿತಿ ಹೆಸರು | ಗ್ರಾಮ ಪಂಚಾಯಿತಿಗೆ ಒಳಪಡುವ ಗ್ರಾಮಗಳು | ಷರಾ |
|---|---|---|---|
| | | ಕುಕ್ಕೆ | |
| | | ಧಾನಸಾಲೆ | |
| | | ಹೊಸಬೀಡು | |
| | | ನೇರಲಕೊಪ್ಪ | |
| | | ಬೆಟ್ಟಬರವಸಾನಿ | |
| | | ತೋಟದಕೊಪ್ಪ | |
| 2 | ಕನ್ನಂಗಿ | ಕನ್ನಂಗಿ | |
| | | ಗರಗ | |
| | | ಕಿಕ್ಕೇರಿ | |
| | | ಜೀರಹಳ್ಳಿ | |
| | | ವೆಂಕನಹಳ್ಳಿ | |
| | | ಜೋಗಿಕೊಪ್ಪ | |
| | | ಸಾಲೇಕೊಪ್ಪ | |
| | | ಅತ್ತಿಗದ್ದೆ | |
| | | ಯಡವತ್ತಿ | |
| | | ಕಳವತ್ತಿ | |
| | | ಮಲ್ಲಾಪುರ | |
| | | ಆಡಿನಸರ | |
| | | ಮರಹಳ್ಳಿ | |
| **ತಾಲ್ಲೂಕು: ಶಿಕಾರಿಪುರ** | | | |
| 1 | ಸಾಲೂರು | ಸಾಲೂರು | |
| | | ರಾಂಪುರ | |
| | | ಚಿಕ್ಕಾಪುರ(ಕಣಸೋಗಿ)(ಬೇ*) | |
| 2 | ಹೋತನಕಟ್ಟೆ | ಹೋತನಕಟ್ಟೆ | |
| | | ಅಂಬ್ಲಿಗೊಳ್ಳ | |
| | | ಚುಂಚುನಕೊಪ್ಪ | |
| | | ಹರಿಹರಪುರ | |
| 3 | ಮುಡಬಸಿದ್ದಾಪುರ | ಮುಡಬಸಿದ್ದಾಪುರ | |
| | | ಎ.ಅಣ್ಣಾಪುರ | |
| | | ಬಿ.ಅಣ್ಣಾಪುರ (ಬೇ*) | |
| | | ಬನ್ನೂರು | |
| | | ಮಲ್ಲಾಪುರ | |
| **ತಾಲ್ಲೂಕು: ಸೊರಬ** | | | |
| 1 | ಉಳವಿ | ಉಳವಿ | |
| | | ಮಳಲಗದ್ದೆ | |
| | | ಹೊಸಮಳಲಗದ್ದೆ (ಬೇ*) | |
| | | ಕೋಳಿಸಾಲು | |
| | | ಅವಲಗೋಡು | |
| | | ಕಾನಹಳ್ಳಿ | |
| | | ಖರ್ಜಿಕೊಪ್ಪ | |
| | | ಮೈಸಾವಿ | |
| | | ಕೈಸೋಡಿ | |
| | | ಕಣ್ಣೂರು | |

| ಕ್ರ.ಸಂ | ಗ್ರಾಮ ಪಂಚಾಯಿತಿ ಹೆಸರು | ಗ್ರಾಮ ಪಂಚಾಯಿತಿಗೆ ಒಳಪಡುವ ಗ್ರಾಮಗಳು | ಷರಾ |
|---|---|---|---|
| | | ಬಿ.ದೊಡ್ಡೇರಿ | |
| | | ಭದ್ರಾಪುರ | |
| | | ದೇವಗೊಂಡಿಕೊಪ್ಪ(ಬೇ*) | |
| 2 | ದುಗೂರು | ದುಗೂರು | |
| | | ಹೊರಬೈಲು | |
| | | ಹೊಡಬಟ್ಟೆ | |
| | | ದಳವಾಯಿ ಹೊಸಕೊಪ್ಪ | |
| | | ಬರಗಿ | |
| | | ಹಲಸಿನಕೊಪ್ಪ | |
| | | ಸಣಮನೆ | |
| | | ಅಮಚಿ | |
| | | ಹೊಳೆಕೊಪ್ಪ | |
| 3 | ಕೊಡಕಣಿ | ಕೊಡಕಣಿ | |
| | | ಕುಣಜಿ | |
| | | ಕಾನಕೊಪ್ಪ | |
| | | ಚಿಕ್ಕಶಕುನ | |
| | | ಸೀಗೆಹಳ್ಳಿ (ಬೇ*) | |
| 4 | ಅಂಡಿಗೆ | ಅಂಡಿಗೆ | |
| | | ಉರಗನಹಳ್ಳಿ | |
| | | ದೇವತಿಕೊಪ್ಪ | |
| | | ಹಿರೇಯಾವಲಿ | |
| | | ಹರೂರು | |
| | | ಶಾಂತಗೆರೆ | |
| ತಾಲ್ಲೂಕು: ಹೊಸನಗರ | | | |
| 1 | ರಿಪ್ಪನಪೇಟೆ | ಗವಟೂರು | |
| | | ಮುಗಟೆಕೊಪ್ಪ | |
| 2 | ಬರುವೆ | ಬರುವೆ | |
| | | ಕೆರೆಹಳ್ಳಿ | |
| 3 | ತ್ರಿಣಿವೆ | ತ್ರಿಣಿವೆ | |
| | | ತೊಗರೆ | |
| | | ಬಿಲ್ಲೋಡಿ | |
| | | ಕಲ್ಲುವೀಡಿಅಬ್ಬಿಗಲ್ಲು | |
| 4 | ಸೊನಲೆ | ಸೊನಲೆ | |
| | | ನಿವಣೆ | |
| | | ಬೋರಿಕೊಪ್ಪ | |
| | | ವಾರಂಬಳ್ಳಿ | |
| | | ಕೊಳಗೆ | |
| | | ಈರಾಗೋಡು | |
| | | ಆದುವಳ್ಳಿ | |
| 5 | ಮೇಲಿನಬೆಸಿಗೆ | ಮೇಲಿನಬೆಸಿಗೆ | |
| | | ಗೊರಗೋಡು | |

| ಕ್ರ.ಸಂ | ಗ್ರಾಮ ಪಂಚಾಯಿತಿ ಹೆಸರು | ಗ್ರಾಮ ಪಂಚಾಯಿತಿಗೆ ಒಳಪಡುವ ಗ್ರಾಮಗಳು | ಷರಾ |
|---|---|---|---|
| | | ಹೆಚ್.ಹೊನ್ನೇಕೊಪ್ಪ | |
| | | ಎಲ್.ಗುಡ್ಡೇಕೊಪ್ಪ | |
| | | ಮಣಸೆಟ್ಟೆ | |
| | | ಮಳಲಿ | |
| | | ಟಂಕಬೈಲು | |
| | | ಸುತ್ತ | |
| | | ವಸವೆ | |
| 6 | ರಾಮಚಂದ್ರಾಪುರ | ರಾಮಚಂದ್ರಾಪುರ | |
| | | ಸಾಲಗೆರೆ | |
| | | ಕುಕ್ಕೋಡು ಅಗಸರಮನೆ | |
| | | ಹನಿಯಾ | |
| | | ಕಾರಗಡಿ | |
| | | ಬಾಳೆಕೊಪ್ಪ | |
| | | ಕುಂಬತ್ತಿ | |
| | | ನಲ್ಲುಂಡೆ | |

**ವಿ.ಪಿ. ಇಕ್ಕೇರಿ**
**ಜಿಲ್ಲಾಧಿಕಾರಿ,**
**ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಮಂಗಳವಾರ, ಜನವರಿ ೨೦, ೨೦೧೫ (ಪುಷ್ಯ ೩೦, ಶಕ ವರ್ಷ ೧೯೩೬) | ನಂ. ೬೬ |
|---|---|---|
| **Part– III** | **Bengaluru, Tuesday, January 20, 2015 (Pushya 30, Shaka Varsha 1936)** | **No. 66** |

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.**

[4(2) ನೇ ಪ್ರಕರಣವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ. ರಾಚು ಸಿಆರ್.26/2014-15, ದಿನಾಂಕ : 19-1-2015**

ಗ್ರಾಮ ಪಂಚಾಯತಿಗಳ ಪುನರ್ ವಿಂಗಡಣಾ ಸಮಿತಿಯು ಸಾರ್ವಜನಿಕರ ಮನವಿ ಹಾಗೂ ಸಂಬಂಧಿಸಿದ ಜನಪ್ರತಿನಿಧಿಗಳ ಕೋರಿಕೆಯನ್ನಾಧರಿಸಿ, ರಾಜ್ಯದಲ್ಲಿ ಹೊಸ ಗ್ರಾಮ ಪಂಚಾಯತಿಗಳನ್ನು ಸೃಜಿಸಲು ಹಾಗೂ ಹಲವಾರು ಗ್ರಾಮಗಳನ್ನು ಒಂದು ಗ್ರಾಮ ಪಂಚಾಯತಿಯಿಂದ ಮತ್ತೊಂದು ಗ್ರಾಮ ಪಂಚಾಯತಿ ವ್ಯಾಪ್ತಿಗೆ ವರ್ಗಾಯಿಸಲು ಶಿಫಾರಸ್ಸುಗಳನ್ನೊಳಗೊಂಡ ಸಮಗ್ರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ. ಸರ್ಕಾರವು ವರದಿಯನ್ನು ಪರಿಶೀಲಿಸಿ ಪತ್ರ ಸಂಖ್ಯೆ: ಸರ್ಕಾರವು ತಮ್ಮ ಪತ್ರ ಸಂಖ್ಯೆ: ಗ್ರಾಅಪ 10 ಗ್ರಾಪಂಅ 2015 ದಿನಾಂಕ: 09.01.2015ರಲ್ಲಿ ಗ್ರಾಮ ಪಂಚಾಯತಿ ಪುನರವಿಂಗಡಣೆ, ವಿಭಜನೆ ಮತ್ತು ಹೊಸ ಗ್ರಾಮ ಪಂಚಾಯತಿಗಳ ರಚನೆಯನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 4(2) ಅನ್ವಯ ಪರಿಶೀಲಿಸಿ ಅಗತ್ಯ ಕ್ರಮಕೈಗೊಳ್ಳಲು ಸೂಚಿಸಿದೆ.

ಸರ್ಕಾರದ ಪತ್ರದಲ್ಲಿನ ನಿರ್ದೇಶನ ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 4 (2) ರನ್ವಯ ದಾವಣಗೆರೆ ಜಿಲ್ಲೆ **ಹರಿಹರ ತಾಲ್ಲೂಕಿನಲ್ಲಿ** ಹೊಸದಾಗಿ ಗ್ರಾಮಪಂಚಾಯತಿ ರಚಿಸುವ ಬಗ್ಗೆ ಮತ್ತು ಗ್ರಾಮ ಪಂಚಾಯತಿಯ ಕೆಲವು ಗ್ರಾಮಗಳನ್ನು ಒಂದು ಗ್ರಾಮಪಂಚಾಯತಿಯಿಂದ ಮತ್ತೊಂದು ಗ್ರಾಮಪಂಚಾಯತಿಗೆ ವರ್ಗಾಯಿಸುವ ಬಗ್ಗೆ ಕರಡು ಅಧಿಸೂಚನೆಯನ್ನು ಪ್ರಕಟಿಸಿದೆ. ಕೊಷ್ಟಕದ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದಂತೆ ಗ್ರಾಮ, ಗ್ರಾಮಗಳ ಸಮೂಹಗಳನ್ನೊಳಗೊಂಡ ಪ್ರದೇಶವು ಒಂದು ಗ್ರಾಮ ಪಂಚಾಯತಿಯಾಗಿರುತ್ತದೆ ಮತ್ತು 4ನೇ ಅಂಕಣದಲ್ಲಿ ನಿರ್ಧಿಷ್ಟಪಡಿಸಿರುವಂತಹ ಸ್ಥಳವು ಅದರ ಕೇಂದ್ರ ಕಾರ್ಯಸ್ಥಾನವಾಗಿರುತ್ತದೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದ್ದು ಸಾರ್ವಜನಿಕರ ಸಲಹೆ ಮತ್ತು ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. ಸಲಹೆ ಮತ್ತು ಆಕ್ಷೇಪಣೆಗಳ ಬಗ್ಗೆ ದಿನಾಂಕ 29-1-2015 ರೊಳಗೆ ಲಿಖಿತ ಅರ್ಜಿಗಳನ್ನು ಜಿಲ್ಲಾಧಿಕಾರಿಗಳ ಕಛೇರಿ, ದಾವಣಗೆರೆ ಇವರಿಗೆ ಸಲ್ಲಿಸಬಹುದಾಗಿದೆ.

**ಎಸ್.ಟಿ. ಅಂಜನ್‌ಕುಮಾರ್**
ಜಿಲ್ಲಾಧಿಕಾರಿ
ದಾವಣಗೆರೆ ಜಿಲ್ಲೆ

**ಕೋಷ್ಟಕ**

**ಸೃಜಿಸಿರುವ ಹೊಸ ಗ್ರಾಮ ಪಂಚಾಯತಿಗಳು ಹಾಗೂ ಕೆಲವು ಗ್ರಾಮಗಳನ್ನು ಒಂದು ಗ್ರಾಮ ಪಂಚಾಯತಿ ವ್ಯಾಪ್ತಿಗೆ ವರ್ಗಾಯಿಸಿರುವ ಕೋಷ್ಟಕ**

| ಜಿಲ್ಲೆ: ದಾವಣಗೆರೆ | | | | | | | ತಾಲ್ಲೂಕು : ಹರಿಹರ |
|---|---|---|---|---|---|---|---|
| ಕ್ರ. ಸಂ | ಹಾಲಿ ಗ್ರಾಮ ಪಂಚಾಯತಿ | ಗ್ರಾಮಗಳು | ಹೊಸ ಗ್ರಾಮ ಪಂಚಾಯತಿ | ಗ್ರಾಮ, ಗ್ರಾಮಗಳ ಸಮೂಹ | ಹಳೆ ಗ್ರಾಮ ಪಂಚಾಯತಿ ಹೆಸರು | ಹಳೆ ಪಂಚಾಯತಿ ಯಲ್ಲಿ ಉಳಿಯುವ ಗ್ರಾಮಗಳು | ಷರಾ |
| 1 | 2 | 3 | 4 | 5 | 6 | 7 | 8 |
| 1 | ಕಡರನಾಯ್ಕನ ಹಳ್ಳಿ | ಕಡರನಾಯ್ಕನ ಹಳ್ಳಿ | ಉಕ್ಕಡಗಾತ್ರಿ | ಉಕ್ಕಡಗಾತ್ರಿ | ಕಡರನಾಯ್ಕನ ಹಳ್ಳಿ | ಕಡರನಾಯ್ಕನ ಹಳ್ಳಿ | ವಾಸನ ಗ್ರಾಮ ಪಂಚಾಯತಿಯ ಗೋವಿನ ಹಾಳು ಮತ್ತು ನಂದಿಗುಡಿ ಯನ್ನು ಉಕ್ಕಡಗಾತ್ರಿ ಗ್ರಾಮ ಪಂಚಾಯತಿಗೆ ಸೇರಿಸಿದೆ. |
| | | ಪಾಳ್ಯ | | | | ಪಾಳ್ಯ | |
| | | ಉಕ್ಕಡಗಾತ್ರಿ | | | | | |
| 2 | ವಾಸನ | ವಾಸನ | | ಗೋವಿನ ಹಾಳು | ವಾಸನ | ವಾಸನ | |
| | | ಗೋವಿನಹಾಳು | | | | | |
| | | ಹಿಂಡಸಗಟ್ಟೆ | | ನಂದಿಗುಡಿ | | ಹಿಂಡಸಗಟ್ಟೆ | |
| | | ನಂದಿಗುಡಿ | | | | | |

ವಿ.ಸೂ : ಬದಲಾವಣೆಯಾದ ಗ್ರಾಮ ಪಂಚಾಯತಿಗಳನ್ನು ಮಾತ್ರ ಇಲ್ಲಿ ಪಟ್ಟಿ ಮಾಡಲಾಗಿದೆ. ಈ ಪಟ್ಟಿಯಲ್ಲಿ ದಾಖಲಾಗದ ಗ್ರಾಮ ಪಂಚಾಯತಿಯಲ್ಲಿ ಮತ್ತು ಗ್ರಾಮಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

**ಎಸ್.ಟಿ. ಅಂಜನ್‌ಕುಮಾರ್**

ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ- III | ಬೆಂಗಳೂರು, ಮಂಗಳವಾರ, ಜನವರಿ ೨೦, ೨೦೧೫ (ಪುಷ್ಯ ೩೦, ಶಕ ವರ್ಷ ೧೯೩೬) | ನಂ. ೬೭ |
|---|---|---|
| Part- III | Bengaluru, Tuesday, January 20, 2015 (Pushya 30, Shaka Varsha 1936) | No. 67 |

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.**

[4(2) ನೇ ಪ್ರಕರಣವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ. ರಾಚು ಸಿಆರ್.26/2014-15, ದಿನಾಂಕ : 19-1-2015**

ಗ್ರಾಮ ಪಂಚಾಯತಿಗಳ ಪುನರ್ ವಿಂಗಡಣಾ ಸಮಿತಿಯು ಸಾರ್ವಜನಿಕರ ಮನವಿ ಹಾಗೂ ಸಂಬಂಧಿಸಿದ ಜನಪ್ರತಿನಿಧಿಗಳ ಕೋರಿಕೆಯನ್ನಾಧರಿಸಿ, ರಾಜ್ಯದಲ್ಲಿ ಹೊಸ ಗ್ರಾಮ ಪಂಚಾಯತಿಗಳನ್ನು ಸೃಜಿಸಲು ಹಾಗೂ ಹಲವಾರು ಗ್ರಾಮಗಳನ್ನು ಒಂದು ಗ್ರಾಮ ಪಂಚಾಯತಿಯಿಂದ ಮತ್ತೊಂದು ಗ್ರಾಮ ಪಂಚಾಯತಿ ವ್ಯಾಪ್ತಿಗೆ ವರ್ಗಾಯಿಸಲು ಶಿಫಾರಸ್ಸುಗಳನ್ನೊಳಗೊಂಡ ಸಮಗ್ರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ. ಸರ್ಕಾರವು ವರದಿಯನ್ನು ಪರಿಶೀಲಿಸಿ ಪತ್ರ ಸಂಖ್ಯೆ: ಸರ್ಕಾರವು ತಮ್ಮ ಪತ್ರ ಸಂಖ್ಯೆ:ಗ್ರಾಅಪ 10 ಗ್ರಾಪಂಅ 2015 ದಿನಾಂಕ:09.01.2015ರಲ್ಲಿ ಗ್ರಾಮ ಪಂಚಾಯತಿ ಪುನರವಿಂಗಡಣೆ, ವಿಭಜನೆ ಮತ್ತು ಹೊಸ ಗ್ರಾಮ ಪಂಚಾಯತಿಗಳ ರಚನೆಯನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 4(2) ಅನ್ವಯ ಪರಿಶೀಲಿಸಿ ಅಗತ್ಯ ಕ್ರಮಕೈಗೊಳ್ಳಲು ಸೂಚಿಸಿದೆ.

ಸರ್ಕಾರದ ಪತ್ರದಲ್ಲಿನ ನಿರ್ದೇಶನ ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 4 (2) ರನ್ವಯ ದಾವಣಗೆರೆ ಜಿಲ್ಲೆ **ಹರಪನಹಳ್ಳಿ ತಾಲ್ಲೂಕಿನಲ್ಲಿ** ಹೊಸದಾಗಿ ಗ್ರಾಮಪಂಚಾಯತಿ ರಚಿಸುವ ಬಗ್ಗೆ ಮತ್ತು ಗ್ರಾಮ ಪಂಚಾಯತಿಯ ಕೆಲವು ಗ್ರಾಮಗಳನ್ನು ಒಂದು ಗ್ರಾಮಪಂಚಾಯತಿಯಿಂದ ಮತ್ತೊಂದು ಗ್ರಾಮಪಂಚಾಯತಿಗೆ ವರ್ಗಾಯಿಸುವ ಬಗ್ಗೆ ಕರಡು ಅಧಿಸೂಚನೆಯನ್ನು ಪ್ರಕಟಿಸಿದೆ. ಕೊಷ್ಟಕದ 5ನೇ ಅಂಕಣದಲ್ಲಿ ನಿಧಿಷ್ಟಪಡಿಸಿದಂತೆ ಗ್ರಾಮ, ಗ್ರಾಮಗಳ ಸಮೂಹಗಳನ್ನೊಳಗೊಂಡ ಪ್ರದೇಶವು ಒಂದು ಗ್ರಾಮ ಪಂಚಾಯತಿಯಾಗಿರುತ್ತದೆ ಮತ್ತು 4ನೇ ಅಂಕಣದಲ್ಲಿ ನಿರ್ಧಿಷ್ಟಪಡಿಸಿರುವಂತಹ ಸ್ಥಳವು ಅದರ ಕೇಂದ್ರ ಕಾರ್ಯಸ್ಥಾನವಾಗಿರುತ್ತದೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದ್ದು ಸಾರ್ವಜನಿಕರ ಸಲಹೆ ಮತ್ತು ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. ಸಲಹೆ ಮತ್ತು ಆಕ್ಷೇಪಣೆಗಳ ಬಗ್ಗೆ ದಿನಾಂಕ 29-1-2015 ರೊಳಗೆ ಲಿಖಿತ ಅರ್ಜಿಗಳನ್ನು ಜಿಲ್ಲಾಧಿಕಾರಿಗಳ ಕಛೇರಿ, ದಾವಣಗೆರೆ ಇವರಿಗೆ ಸಲ್ಲಿಸಬಹುದಾಗಿದೆ.

**ಎಸ್.ಟಿ. ಅಂಜನ್‌ಕುಮಾರ್**

ಜಿಲ್ಲಾಧಿಕಾರಿ,

ದಾವಣಗೆರೆ ಜಿಲ್ಲೆ.

**ಕೋಷ್ಟಕ**

**ಸೃಜಿಸಿರುವ ಹೊಸ ಗ್ರಾಮ ಪಂಚಾಯತಿಗಳು ಹಾಗೂ ಕೆಲವು ಗ್ರಾಮಗಳನ್ನು ಒಂದು ಗ್ರಾಮ ಪಂಚಾಯತಿ ವ್ಯಾಪ್ತಿಗೆ ವರ್ಗಾಯಿಸಿರುವ ಕೋಷ್ಟಕ**

| ಜಿಲ್ಲೆ: ದಾವಣಗೆರೆ | | | | | | | ತಾಲ್ಲೂಕು : ಹರಪನಹಳ್ಳಿ |
|---|---|---|---|---|---|---|---|
| ಕ್ರ. ಸಂ | ಹಾಲಿಗ್ರಾಮ ಪಂಚಾಯತಿ | ಗ್ರಾಮಗಳು | ಹೊಸ ಗ್ರಾಮ ಪಂಚಾಯತಿ | ಗ್ರಾಮ, ಗ್ರಾಮಗಳ ಸಮೂಹ | ಹಳೆ ಗ್ರಾಮ ಪಂಚಾಯತಿ ಹೆಸರು | ಹಳೆ ಪಂಚಾಯತಿ ಯಲ್ಲಿ ಉಳಿಯುವ ಗ್ರಾಮಗಳು | ಷರಾ |
| 1 | 2 | 3 | 4 | 5 | 6 | 7 | 8 |
| 1 | **ದುಗ್ಗಾವತಿ** | ದುಗ್ಗಾವತಿ | **ಕಡತಿ** | ಕಡತಿ | **ದುಗ್ಗಾವತಿ** | ದುಗ್ಗಾವತಿ | |
| | | ಕಡತಿ | | | | | |
| 2 | **ಹಿರೇಮೇಗಳಗೆರೆ** | ಹಿರೇಮೇಗಳಗೆರೆ | | ಲಕ್ಷ್ಮೀಪುರ | **ಹಿರೇಮೇಗಳ ಗೆರೆ** | ಹಿರೇಮೇಗಳಗೆರೆ | |
| | | ಲಕ್ಷ್ಮೀಪುರ | | | | | |
| 3 | **ಶಿಂಗ್ರಿಹಳ್ಳಿ** | ಶಿಂಗ್ರಿಹಳ್ಳಿ | **ಲಕ್ಷ್ಮೀಪುರ** | ಸತ್ತೂರು | **ಶಿಂಗ್ರಿಹಳ್ಳಿ** | ಶಿಂಗ್ರಿಹಳ್ಳಿ | ಹಳ್ಳಿಕೇರಿ ಗ್ರಾಮವನ್ನು ಕಂಚಿಕೇರಿ ಗ್ರಾಮ ಪಂಚಾಯತಿ ಯಿಂದ ತೆಗೆದು ಶಿಂಗ್ರಿಹಳ್ಳಿ ಗ್ರಾಮ ಪಂಚಾಯತಿಗೆ ಸೇರಿಸಿದೆ. |
| | | ಸತ್ತೂರು | | | | ಹಳ್ಳಿಕೇರಿ | |
| 4 | **ಕಂಚಿಕೇರಿ** | ಕಂಚಿಕೇರಿ | | | **ಕಂಚಿಕೇರಿ** | ಕಂಚಿಕೇರಿ | ಕಂಚಿಕೇರಿ ಗ್ರಾಮ ಪಂಚಾಯತಿಯ ಹಳ್ಳಿಕೇರಿ ಗ್ರಾಮವನ್ನು ಶಿಂಗ್ರಿಹಳ್ಳಿ ಗ್ರಾಮ ಪಂಚಾಯತಿಗೆ ವರ್ಗಾಯಿಸ ಲಾಗಿದೆ. |
| | | ಹಳ್ಳಿಕೇರಿ | | | | | |

**ವಿ.ಸೂ :** ಬದಲಾವಣೆಯಾದ ಗ್ರಾಮ ಪಂಚಾಯತಿಗಳನ್ನು ಮಾತ್ರ ಇಲ್ಲಿ ಪಟ್ಟಿ ಮಾಡಲಾಗಿದೆ. ಈ ಪಟ್ಟಿಯಲ್ಲಿ ದಾಖಲಾಗದ ಗ್ರಾಮ ಪಂಚಾಯತಿಯಲ್ಲಿ ಮತ್ತು ಗ್ರಾಮಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

**ಎಸ್.ಟಿ. ಅಂಜನ್‌ಕುಮಾರ್**
ಜಿಲ್ಲಾಧಿಕಾರಿ
ದಾವಣಗೆರೆ ಜಿಲ್ಲೆ.


# ವಿಶೇಷ ರಾಜ್ಯ ಪತ್ರಿಕೆ

| ಭಾಗ- III | ಬೆಂಗಳೂರು, ಮಂಗಳವಾರ, ಜನವರಿ ೨೦, ೨೦೧೫ (ಪುಷ್ಯ ೩೦, ಶಕ ವರ್ಷ ೧೯೩೬) | ನಂ. ೬೮ |
|---|---|---|
| Part- III | Bengaluru, Tuesday, January 20, 2015 (Pushya 30, Shaka Varsha 1936) | No. 68 |


**ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.**

[4(2) ನೇ ಪ್ರಕರಣವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ ರಾಚು ಸಿಆರ್.26/2014-15, ದಿನಾಂಕ : 19-1-2015**

ಗ್ರಾಮ ಪಂಚಾಯತಿಗಳ ಪುನರ್ ವಿಂಗಡಣಾ ಸಮಿತಿಯು ಸಾರ್ವಜನಿಕರ ಮನವಿ ಹಾಗೂ ಸಂಬಂಧಿಸಿದ ಜನಪ್ರತಿನಿಧಿಗಳ ಕೋರಿಕೆಯನ್ನಾಧರಿಸಿ, ರಾಜ್ಯದಲ್ಲಿ ಹೊಸ ಗ್ರಾಮ ಪಂಚಾಯತಿಗಳನ್ನು ಸೃಜಿಸಲು ಹಾಗೂ ಹಲವಾರು ಗ್ರಾಮಗಳನ್ನು ಒಂದು ಗ್ರಾಮ ಪಂಚಾಯತಿಯಿಂದ ಮತ್ತೊಂದು ಗ್ರಾಮ ಪಂಚಾಯತಿ ವ್ಯಾಪ್ತಿಗೆ ವರ್ಗಾಯಿಸಲು ಶಿಫಾರಸ್ಸುಗಳನ್ನೊಳಗೊಂಡ ಸಮಗ್ರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ. ಸರ್ಕಾರವು ವರದಿಯನ್ನು ಪರಿಶೀಲಿಸಿ ಪತ್ರ ಸಂಖ್ಯೆ: ಸರ್ಕಾರವು ತಮ್ಮ ಪತ್ರ ಸಂಖ್ಯೆ:ಗ್ರಾಅಪ 10 ಗ್ರಾಪಂಅ 2015 ದಿನಾಂಕ:09.01.2015ರಲ್ಲಿ ಗ್ರಾಮ ಪಂಚಾಯತಿ ಪುನರವಿಂಗಡಣೆ, ವಿಭಜನೆ ಮತ್ತು ಹೊಸ ಗ್ರಾಮ ಪಂಚಾಯತಿಗಳ ರಚನೆಯನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 4(2) ಅನ್ವಯ ಪರಿಶೀಲಿಸಿ ಅಗತ್ಯ ಕ್ರಮಕೈಗೊಳ್ಳಲು ಸೂಚಿಸಿದೆ.

ಸರ್ಕಾರದ ಪತ್ರದಲ್ಲಿನ ನಿರ್ದೇಶನ ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 4 (2) ರನ್ವಯ ದಾವಣಗೆರೆ ಜಿಲ್ಲೆ **ಜಗಳೂರು ತಾಲ್ಲೂಕಿನಲ್ಲಿ** ಗ್ರಾಮ ಪಂಚಾಯತಿಯ ಕೆಲವು ಗ್ರಾಮಗಳನ್ನು ಒಂದು ಗ್ರಾಮಪಂಚಾಯತಿಯಿಂದ ಮತ್ತೊಂದು ಗ್ರಾಮಪಂಚಾಯತಿಗೆ ವರ್ಗಾಯಿಸುವ ಬಗ್ಗೆ ಕರಡು ಅಧಿಸೂಚನೆಯನ್ನು ಪ್ರಕಟಿಸಿದೆ. ಕೊಷ್ಟಕದ 5ನೇ ಅಂಕಣದಲ್ಲಿ ನಿಧಿಷ್ಟಪಡಿಸಿದಂತೆ ಗ್ರಾಮ, ಗ್ರಾಮಗಳ

ಸಮೂಹಗಳನ್ನೊಳಗೊಂಡ ಪ್ರದೇಶವು ಒಂದು ಗ್ರಾಮ ಪಂಚಾಯತಿಯಾಗಿರುತ್ತದೆ ಮತ್ತು 4ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿರುವಂತಹ ಸ್ಥಳವು ಅದರ ಕೇಂದ್ರ ಕಾರ್ಯಸ್ಥಾನವಾಗಿರುತ್ತದೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದ್ದು ಸಾರ್ವಜನಿಕರ ಸಲಹೆ ಮತ್ತು ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. ಸಲಹೆ ಮತ್ತು ಆಕ್ಷೇಪಣೆಗಳ ಬಗ್ಗೆ ದಿನಾಂಕ 29–1–2015 ರೊಳಗೆ ಲಿಖಿತ ಅರ್ಜಿಗಳನ್ನು ಜಿಲ್ಲಾಧಿಕಾರಿಗಳ ಕಛೇರಿ, ದಾವಣಗೆರೆ ಇವರಿಗೆ ಸಲ್ಲಿಸಬಹುದಾಗಿದೆ.

**ಎಸ್.ಟಿ. ಅಂಜನ್‌ಕುಮಾರ್**

ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ

**ಕೋಷ್ಟಕ**

**ಸೃಜಿಸಿರುವ ಹೊಸ ಗ್ರಾಮ ಪಂಚಾಯತಿಗಳು ಹಾಗೂ ಕೆಲವು ಗ್ರಾಮಗಳನ್ನು ಒಂದು ಗ್ರಾಮ ಪಂಚಾಯತಿ ವ್ಯಾಪ್ತಿಗೆ ವರ್ಗಾಯಿಸಿರುವ ಕೋಷ್ಟಕ**

| **ಜಿಲ್ಲೆ: ದಾವಣಗೆರೆ** | | | | | | | **ತಾಲ್ಲೂಕು : ಜಗಳೂರು** |
|---|---|---|---|---|---|---|---|
| **ಕ್ರ, ಸಂ** | **ಹಾಲಿ ಗ್ರಾಮ ಪಂಚಾಯತಿ** | **ಗ್ರಾಮಗಳು** | **ಹೊಸ ಗ್ರಾಮ ಪಂಚಾಯತಿ** | **ಗ್ರಾಮ, ಗ್ರಾಮಗಳ ಸಮೂಹ** | **ಹಳೆ ಗ್ರಾಮ ಪಂಚಾಯತಿ ಹೆಸರು** | **ಹಳೆ ಪಂಚಾಯತಿಯಲ್ಲಿ ಉಳಿಯುವ ಗ್ರಾಮಗಳು** | **ಷರಾ** |
| **1** | **2** | **3** | **4** | **5** | **6** | **7** | **8** |
| 1 | **ಗುತ್ತಿದುರ್ಗ** | ಗುತ್ತಿದುರ್ಗ | | | **ಗುತ್ತಿದುರ್ಗ** | ಗುತ್ತಿದುರ್ಗ | ಗುತ್ತಿದುರ್ಗ ಗ್ರಾಮ ಪಂಚಾಯತಿಯಿಂದ ಶೆಟ್ಟಿಗೊಂಡನಹಳ್ಳಿ ಗ್ರಾಮವನ್ನು ಕೈಬಿಡಲಾಗಿದೆ. |
| | | ಚಿಕ್ಕಅರಕೆರೆ | | | | ಚಿಕ್ಕಅರಕೆರೆ | |
| | | ಹಳವದಂಡಿ | | | | ಹಳವದಂಡಿ | |
| | | ಹಿರೇಅರಕೆರೆ | | | | ಹಿರೇಅರಕೆರೆ | |
| | | ಕೊರಟಿಕೆರೆ | | | | ಕೊರಟಿಕೆರೆ | |
| | | ಮೆದಗಿನಕೆರೆ | | | | ಮೆದಗಿನಕೆರೆ | |
| | | ಸಾಗಲಗಟ್ಟೆ | | | | ಸಾಗಲಗಟ್ಟೆ | |
| | | ಶೆಟ್ಟಿಗೊಂಡನಹಳ್ಳಿ | | | | ಸೋಮನಹಳ್ಳಿ | |
| | | ಸೋಮನಹಳ್ಳಿ | | | | | |
| 2 | **ದೇವಿಕೆರೆ** | ದೇವಿಕೆರೆ | | | **ದೇವಿಕೆರೆ** | ದೇವಿಕೆರೆ | ಗುತ್ತಿದುರ್ಗ ಗ್ರಾಮ ಪಂಚಾಯತಿಯಿಂದ ಶೆಟ್ಟಿಗೊಂಡನಹಳ್ಳಿ ಗ್ರಾಮವನ್ನು ದೇವಿಕೆರೆ ಗ್ರಾಮ ಪಂಚಾಯತಿಗೆ ವರ್ಗಾಯಿಸಲಾಗಿದೆ. |
| | | ಬಸವಾಪುರ | | | | ಬಸವಾಪುರ | |
| | | ಚನ್ನಪುರ | | | | ಚನ್ನಪುರ | |
| | | ಗುಡ್ಡದ ಲಿಂಗನಹಳ್ಳಿ | | | | ಗುಡ್ಡದ ಲಿಂಗನಹಳ್ಳಿ | |
| | | ಐನಹಳ್ಳಿ | | | | ಐನಹಳ್ಳಿ | |
| | | ಕೊಡದಗುಡ್ಡ | | | | ಕೊಡದಗುಡ್ಡ | |
| | | ಮೆದಕೇರನಹಳ್ಳಿ | | | | ಮೆದಕೇರನಹಳ್ಳಿ | |
| | | ಮೀನಿಗರೆಹಳ್ಳಿ | | | | ಮೀನಿಗರೆಹಳ್ಳಿ | |
| | | ಮುಷ್ಟಿಗರಹಳ್ಳಿ | | | | ಮುಷ್ಟಿಗರಹಳ್ಳಿ | |
| | | ಸೂರಡ್ಡಿಹಳ್ಳಿ | | | | ಸೂರಡ್ಡಿಹಳ್ಳಿ | |
| | | | | | | ಶೆಟ್ಟಿಗೊಂಡನಹಳ್ಳಿ | |

ವಿ.ಸೂ : ಬದಲಾವಣೆಯಾದ ಗ್ರಾಮ ಪಂಚಾಯತಿಗಳನ್ನು ಮಾತ್ರ ಇಲ್ಲಿ ಪಟ್ಟಿ ಮಾಡಲಾಗಿದೆ. ಈ ಪಟ್ಟಿಯಲ್ಲಿ ದಾಖಲಾಗದ ಗ್ರಾಮ ಪಂಚಾಯತಿಯಲ್ಲಿ ಮತ್ತು ಗ್ರಾಮಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

**ಎಸ್.ಟಿ. ಅಂಜನ್‌ಕುಮಾರ್**

ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ

R.I.N. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment WPP No. 297



# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಶನಿವಾರ, ಜನವರಿ ೩೧, ೨೦೧೫ (ಮಾಘ ೧೧, ಶಕ ವರ್ಷ ೧೯೩೬) | ನಂ. ೯೪ |
|---|---|---|
| Part– III | Bengaluru, Saturday, January 31, 2015 (Magha 11, Shaka Varsha 1936) | No. 94 |

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

[4(2) ನೇ ಪ್ರಕರಣವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ ರಾಚು ಸಿಆರ್.26/2014-15, ದಿನಾಂಕ : 19-1-2015**

ಗ್ರಾಮ ಪಂಚಾಯತಿಗಳ ಪುನರ್ ವಿಂಗಡಣಾ ಸಮಿತಿಯು ಸಾರ್ವಜನಿಕರ ಮನವಿ ಹಾಗೂ ಸಂಬಂಧಿಸಿದ ಜನಪ್ರತಿನಿಧಿಗಳ ಕೋರಿಕೆಯನ್ನಾಧರಿಸಿ, ರಾಜ್ಯದಲ್ಲಿ ಹೊಸ ಗ್ರಾಮ ಪಂಚಾಯತಿಗಳನ್ನು ಸೃಜಿಸಲು ಹಾಗೂ ಹಲವಾರು ಗ್ರಾಮಗಳನ್ನು ಒಂದು ಗ್ರಾಮ ಪಂಚಾಯತಿಯಿಂದ ಮತ್ತೊಂದು ಗ್ರಾಮ ಪಂಚಾಯತಿ ವ್ಯಾಪ್ತಿಗೆ ವರ್ಗಾಯಿಸಲು ಶಿಫಾರಸ್ಸುಗಳನ್ನೊಳಗೊಂಡ ಸಮಗ್ರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ. ಸರ್ಕಾರವು ವರದಿಯನ್ನು ಪರಿಶೀಲಿಸಿ ಪತ್ರ ಸಂಖ್ಯೆ: ಸರ್ಕಾರವು ತಮ್ಮ ಪತ್ರ ಸಂಖ್ಯೆ:ಗ್ರಾಅಪ 10 ಗ್ರಾಪಂಅ 2015 ದಿನಾಂಕ:09.01.2015ರಲ್ಲಿ ಗ್ರಾಮ ಪಂಚಾಯತಿ ಪುನರವಿಂಗಡಣೆ, ವಿಭಜನೆ ಮತ್ತು ಹೊಸ ಗ್ರಾಮ ಪಂಚಾಯತಿಗಳ ರಚನೆಯನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 4(2) ಅನ್ವಯ ಪರಿಶೀಲಿಸಿ ಅಗತ್ಯ ಕ್ರಮಕೈಗೊಳ್ಳಲು ಸೂಚಿಸಿದೆ.

ಸರ್ಕಾರದ ಪತ್ರದಲ್ಲಿನ ನಿರ್ದೇಶನ ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 4 (2) ರನ್ವಯ ದಾವಣಗೆರೆ ಜಿಲ್ಲೆ **ದಾವಣಗೆರೆ ತಾಲ್ಲೂಕಿನಲ್ಲಿ** ಹೊಸದಾಗಿ ಗ್ರಾಮಪಂಚಾಯತಿ ರಚಿಸುವ ಬಗ್ಗೆ ಮತ್ತು ಗ್ರಾಮ ಪಂಚಾಯತಿಯ ಕೆಲವು ಗ್ರಾಮಗಳನ್ನು ಒಂದು ಗ್ರಾಮಪಂಚಾಯತಿಯಿಂದ ಮತ್ತೊಂದು ಗ್ರಾಮಪಂಚಾಯತಿಗೆ ವರ್ಗಾಯಿಸುವ ಬಗ್ಗೆ ಕರಡು ಅಧಿಸೂಚನೆಯನ್ನು ಪ್ರಕಟಿಸಿದೆ. ಕೊಷ್ಟಕದ 5ನೇ ಅಂಕಣದಲ್ಲಿ ನಿಧಿಷ್ಟಪಡಿಸಿದಂತೆ ಗ್ರಾಮ, ಗ್ರಾಮಗಳ ಸಮೂಹಗಳನ್ನೊಳಗೊಂಡ ಪ್ರದೇಶವು ಒಂದು ಗ್ರಾಮ ಪಂಚಾಯತಿಯಾಗಿರುತ್ತದೆ ಮತ್ತು 4ನೇ ಅಂಕಣದಲ್ಲಿ ನಿರ್ಧಿಷ್ಟಪಡಿಸಿರುವಂತಹ ಸ್ಥಳವು ಅದರ ಕೇಂದ್ರ ಕಾರ್ಯಸ್ಥಾನವಾಗಿರುತ್ತದೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದ್ದು ಸಾರ್ವಜನಿಕರ ಸಲಹೆ ಮತ್ತು ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. ಸಲಹೆ ಮತ್ತು ಆಕ್ಷೇಪಣೆಗಳ ಬಗ್ಗೆ ದಿನಾಂಕ 29-1-2015 ರೊಳಗೆ ಲಿಖಿತ ಅರ್ಜಿಗಳನ್ನು ಜಿಲ್ಲಾಧಿಕಾರಿಗಳ ಕಛೇರಿ, ದಾವಣಗೆರೆ ಇವರಿಗೆ ಸಲ್ಲಿಸಬಹುದಾಗಿದೆ.

**ಎಸ್.ಟಿ. ಅಂಜನ್‌ಕುಮಾರ್**

ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ.

**ಕೋಷ್ಟಕ**

**ಸೃಜಿಸಿರುವ ಹೊಸ ಗ್ರಾಮ ಪಂಚಾಯತಿಗಳು ಹಾಗೂ ಕೆಲವು ಗ್ರಾಮಗಳನ್ನು ಒಂದು ಗ್ರಾಮ ಪಂಚಾಯತಿ ವ್ಯಾಪ್ತಿಗೆ ವರ್ಗಾಯಿಸಿರುವ ಕೋಷ್ಟಕ**

| ಜಿಲ್ಲೆ : ದಾವಣಗೆರೆ | | | | | | | ತಾಲ್ಲೂಕು : ದಾವಣಗೆರೆ |
|---|---|---|---|---|---|---|---|
| ಕ್ರ. ಸಂ | ಹಾಲಿಗ್ರಾಮ ಪಂಚಾಯತಿ | ಗ್ರಾಮಗಳು | ಹೊಸ ಗ್ರಾಮ ಪಂಚಾಯತಿ | ಗ್ರಾಮ, ಗ್ರಾಮಗಳ ಸಮೂಹ | ಹಳೆ ಗ್ರಾಮ ಪಂಚಾಯತಿ ಹೆಸರು | ಹಳೆ ಪಂಚಾಯತಿ ಯಲ್ಲಿ ಉಳಿಯುವ ಗ್ರಾಮಗಳು | ಷರಾ |
| 1 | 2 | 3 | 4 | 5 | 6 | 7 | 8 |
| 1 | ದೊಡ್ಡಬಾತಿ | ದೊಡ್ಡಬಾತಿ | **ಹಳೇಬಾತಿ** | ಹಳೇಬಾತಿ | **ದೊಡ್ಡಬಾತಿ** | ದೊಡ್ಡಬಾತಿ | |
| | | ಹಳೇಬಾತಿ | | | | | |
| | | ನೀಲಾನಹಳ್ಳಿ | | ನೀಲಾನಹಳ್ಳಿ | | | |
| 2 | ಆಲೂರು | ಆಲೂರು | **ಶ್ರೀರಾಮನಗರ** | ಶ್ರೀರಾಮನಗರ | **ಆಲೂರು** | ಆಲೂರ | |
| | | ಮಲ್ಲಾಪುರ | | | | ಮಲ್ಲಾಪುರ | |
| | | ಶ್ರೀರಾಮನಗರ | | | | | |
| 3 | ಅಣಜಿ | ಅಣಜಿ | | ಮೆಳ್ಳೆಕಟ್ಟೆ | **ಅಣಜಿ** | ಅಣಜಿ | ಮೆಳ್ಳೆಕಟ್ಟೆ ಗ್ರಾಮವನ್ನು ಶ್ರೀರಾಮನಗರ ಗ್ರಾಮ ಪಂಚಾಯತಿಗೆ ಸೇರಿಸಿದೆ. |
| | | ಗಿರಿಯಾಪುರ | | | | ಗಿರಿಯಾಪುರ | |
| | | ಗೊಲ್ಲರಹಟ್ಟಿ | | | | ಗೊಲ್ಲರಹಟ್ಟಿ | |
| | | ಮೆಳ್ಳೆಕಟ್ಟೆ | | | | | |
| 4 | ಐಗೂರು | ಐಗೂರು | | ಬೋರಗೊಂಡನ ಹಳ್ಳಿ | **ಐಗೂರು** | ಐಗೂರು | ಬೋರಗೊಂಡನ ಹಳ್ಳಿ ಗ್ರಾಮವನ್ನು ಶ್ರೀರಾಮನಗರ ಗ್ರಾಮ ಪಂಚಾಯತಿಗೆ ಸೇರಿಸಿದೆ. |
| | | ಅಗಸನಕಟ್ಟೆ | | | | ಅಗಸನಕಟ್ಟೆ | |
| | | ಶ್ರೀಕೃಷ್ಣನಗರ | | | | ಶ್ರೀಕೃಷ್ಣನಗರ | |
| | | ತುಂಬಿಗೆರೆ | | | | ತುಂಬಿಗೆರೆ | |
| | | ಲಿಂಗಾಪುರ | | | | ಲಿಂಗಾಪುರ | |
| | | ಬೋರಗೊಂಡನಹಳ್ಳಿ | | | | | |

ವಿ.ಸೂ : ಬದಲಾವಣೆಯಾದ ಗ್ರಾಮ ಪಂಚಾಯತಿಗಳನ್ನು ಮಾತ್ರ ಇಲ್ಲಿ ಪಟ್ಟಿ ಮಾಡಲಾಗಿದೆ. ಈ ಪಟ್ಟಿಯಲ್ಲಿ ದಾಖಲಾಗದ ಗ್ರಾಮ ಪಂಚಾಯತಿಯಲ್ಲಿ ಮತ್ತು ಗ್ರಾಮಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

**ಎಸ್.ಟಿ. ಅಂಜನ್‌ಕುಮಾರ್**

ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– IVA | ಬೆಂಗಳೂರು, ಗುರುವಾರ, ಜನವರಿ ೦೧, ೨೦೧೫ (ಪುಷ್ಯ ೧೧, ಶಕ ವರ್ಷ ೧೯೩೬) | ನಂ. ೧ |
|---|---|---|
| **Part– IVA** | **Bengaluru, Thursday, January 01, 2015 (Pushya 11, Shaka Varsha 1936)** | **No. 1** |


**ಶಿಕ್ಷಣ ಸಚಿವಾಲಯ**

**ಅಧಿಸೂಚನೆ**

**ಸಂ.ಇಡಿ 154 ಡಿಸಿಇ 2013, ಬೆಂಗಳೂರು, ದಿನಾಂಕ 01–07–2014**

ಕರ್ನಾಟಕ ಸಿವಿಲ್ ಸೇವಾ (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆಗಳ ವಿನಿಯಮ) ನಿಯಮಗಳು, 2014ರ ಕರಡನ್ನು ಕರ್ನಾಟಕ ಸಿವಿಲ್ ಸೇವಾ (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆಗಳ ವಿನಿಯಮ) ಅಧಿನಿಯಮ, 2012(2013ರ ಕರ್ನಾಟಕ ಅಧಿನಿಯಮ ಸಂ. 06) ರ 17ನೇ ಪ್ರಕರಣದ (1)ನೇ ಉಪ ಪ್ರಕರಣವು ಅಗತ್ಯಪಡಿಸಿದಂತೆ, ದಿನಾಂಕ 28ನೇ ಫೆಬ್ರವರಿ 2014ರ ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ದ ಭಾಗ –IV (ಎ)ರಲ್ಲಿ ಅಧಿಸೂಚನೆ ಸಂ. ಇಡಿ 154 ಡಿಸಿಇ 2013 ದಿನಾಂಕ 28ನೇ ಫೆಬ್ರವರಿ 2014ರಲ್ಲಿ, ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಸದರಿ ಕರಡು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಮುವ್ವತ್ತು ದಿನಗಳ ಒಳಗಾಗಿ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸಲ್ಲಿಸುವಂತೆ ಕೋರಿ ಪ್ರಕಟಿಸಿರುವುದರಿಂದ;

ಮತ್ತು ಸದರಿ ರಾಜ್ಯಪತ್ರವು, 28ನೇ ಫೆಬ್ರವರಿ 2014ರಿಂದ ಸಾರ್ವಜನಿಕರಿಗೆ ಲಭ್ಯವಾಗುತ್ತಿರುವುದರಿಂದ;

ಮತ್ತು ಸ್ವೀಕರಿಸಲಾದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿರುವುದರಿಂದ;

ಪ್ರಸ್ತುತ, ಕರ್ನಾಟಕ ಸಿವಿಲ್ ಸೇವಾ (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆಗಳ ವಿನಿಯಮ) ಅಧಿನಿಯಮ, 2012 (2013ರ ಕರ್ನಾಟಕ ಅಧಿನಿಯಮ ಸಂ.06)ರ 17ನೇ ಪ್ರಕರಣದ (1)ನೇ ಉಪ–ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸಿರುತ್ತದೆ, ಎಂದರೆ:–

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.– (1)** ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆಗಳ ವಿನಿಯಮ) ನಿಯಮಗಳು, 2014 ಎಂದು ಕರೆಯತಕ್ಕದ್ದು.

(2) ಇವು, ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** (1)ಈ ನಿಯಮಗಳಲ್ಲಿ, ಸಂದರ್ಭಕ್ಕೆ ಬೇರೆ ಅರ್ಥ ಅಗತ್ಯವಿದ್ದ ಹೊರತು,–

(ಎ) 'ಅಧಿನಿಯಮ" ಎಂದರೆ, ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆಗಳ ವಿನಿಯಮ) ಅಧಿನಿಯಮ, 2012;

(ಬಿ) "ಸರ್ಕಾರ" ಎಂದರೆ, ಕರ್ನಾಟಕ ರಾಜ್ಯ ಸರ್ಕಾರ;

(ಸಿ) "ನಮೂನೆ" ಎಂದರೆ, ಈ ನಿಯಮಗಳಿಗೆ ಅನುಬಂಧಿಸಲಾಗಿರುವ ನಮೂನೆ;

(ಡಿ) "ಪ್ರಾಜೆಕ್ಟ್" ಎಂದರೆ, ವಿಶ್ವವಿದ್ಯಾಲಯ ಧನಸಹಾಯ ಅಯೋಗ, ರಾಜ್ಯ ಸರ್ಕಾರ ಅಥವಾ ಶಾಸನಾತ್ಮಕ ಏಜೆನ್ಸಿಯು ಬೋಧಕ ಸಿಬ್ಬಂದಿಗೆ ಒಂದು ನಿರ್ದಿಷ್ಟ ಅವಧಿಯವರೆಗೆ ನೀಡಿರುವ ಸಂಶೋಧನಾ ಕಾರ್ಯ ಎಂದು ಅರ್ಥ;

(ಇ) "ಗಂಭೀರ ಸ್ವರೂಪದ ಖಾಯಿಲೆಗಳು" ಎಂದರೆ

(i) ನೌಕರರ ಖಾಯಿಲೆಯ ಸಂಬಂಧದಲ್ಲಿ ಸರ್ಕಾರವು ಅಧಿಸೂಚಿಸಿರುವಂಥ

ರೋಗಗಳ ಪಟ್ಟಿ;

(ii) ನೌಕರರ ಪತಿ/ಪತ್ನಿ ಮತ್ತು ಮಕ್ಕಳ ಖಾಯಿಲೆಯ ಸಂಬಂಧದಲ್ಲಿ

ಸರ್ಕಾರವು ಅಧಿಸೂಚಿಸಿರುವಂಥ ರೋಗಗಳ ಪಟ್ಟಿ

–ಇವುಗಳಲ್ಲಿರುವಂಥ ಖಾಯಿಲೆಗಳು ಎಂದು ಅರ್ಥ.

(2) ಈ ನಿಯಮಗಳಲ್ಲಿ ಬಳಸಲಾದ ಆದರೆ, ಪರಿಭಾಷಿಸಿರದ ಇತರ ಪದಗಳು ಮತ್ತು ಪದಾವಳಿಗಳು, ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆಗಳ ವಿನಿಯಮ) ಅಧಿನಿಯಮ, 2012 (2013ರ ಕರ್ನಾಟಕ ಅಧಿನಿಯಮ ಸಂ.06)ರಲ್ಲಿ ಅವುಗಳಿಗೆ ಗೊತ್ತುಪಡಿಸಿರುವ ಅದೇ ಅರ್ಥವನ್ನು ಹೊಂದಿರತಕ್ಕದ್ದು.

**3. ಒಬ್ಬ ಸಿಬ್ಬಂದಿಯು ಪೂರ್ಣಗೊಳಿಸಬೇಕಾದ ಕನಿಷ್ಠ ಸೇವಾವಧಿ.–** ಒಬ್ಬ ಸಿಬ್ಬಂದಿ, ಯಾವುದೇ ಇನ್ನೊಂದು ವಲಯಕ್ಕೆ ವರ್ಗಾವಣೆಯಾಗುವುದಕ್ಕೆ ಅಗತ್ಯವಿರುವ ಅರ್ಹತೆ ಪಡೆಯುವುದಕ್ಕಾಗಿ ಒಂದು ವಲಯದಲ್ಲಿ ಪೂರ್ಣಗೊಳಿಸಬೇಕಾದ ಕನಿಷ್ಠ ಸೇವಾವಧಿಯು ಈ ಮುಂದೆ ಗೊತ್ತುಪಡಿಸಲಾದಂತೆ ಇರತಕ್ಕದ್ದು.

**ಕೋಷ್ಟಕ**

| | | **ವರ್ಗಾವಣೆಗೆ ಅಗತ್ಯವಿರುವ ಅರ್ಹತೆ ಪಡೆಯುವುದಕ್ಕಾಗಿ ಯಾವುದೇ ಒಂದು ವಲಯದಲ್ಲಿ ಪೂರ್ಣಗೊಳಿಸಬೇಕಾಗಿರುವ ಕನಿಷ್ಠ ಸೇವಾವಧಿ** |
|---|---|---|
| 1 | ಪ್ರಾಂಶುಪಾಲರು ಗ್ರೇಡ್–I(ಸ್ನಾತಕ ಪದವಿ) ಅಥವಾ ಪ್ರಾಂಶುಪಾಲರು, ಗ್ರೇಡ್–II ಸ್ನಾತಕೋತ್ತರ (ಪದವಿ) | 04 ವರ್ಷಗಳು |
| 2. | ಸಮೂಹ–ಬಿ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ | 05 ವರ್ಷಗಳು |
| 3. | ಸಮೂಹ–ಸಿ ಬೋಧಕೇತರ ಹುದ್ದೆ | 06 ವರ್ಷಗಳು |
| 4. | ಸಮೂಹ–ಡಿ ಬೋಧಕೇತರ ಹುದ್ದೆ | 08 ವರ್ಷಗಳು |

**4. ಸಾರ್ವಜನಿಕ ಸೇವಾ ಹಿತಾಸಕ್ತಿ ದೃಷ್ಟಿಯಿಂದ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿ (ಸಮೂಹ–ಡಿ ಯನ್ನು ಹೊರತುಪಡಿಸಿ)ಯ ವರ್ಗಾವಣೆ.–** 3ನೇ ನಿಯಮದಲ್ಲಿ ಗೊತ್ತುಪಡಿಸಲಾದಂಥ ಕನಿಷ್ಠ ವರ್ಷಗಳ ಸೇವಾವಧಿಯನ್ನು ಪೂರ್ಣಗೊಳಿಸಿರುವಂಥ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯನ್ನು ವರ್ಗಾವಣೆ ಮಾಡತಕ್ಕದ್ದು. ಹೀಗೆ ವರ್ಗಾವಣೆ ಮಾಡುವಾಗ, ಒಂದೇ ಸ್ಥಳದಲ್ಲಿ ಅಥವಾ ವಲಯದಲ್ಲಿ ಹೆಚ್ಚಿನ ವರ್ಷಗಳ ಕಾಲ ಸೇವಾವಧಿಯನ್ನು ಪೂರ್ಣಗೊಳಿಸಿರುವಂಥ ವ್ಯಕ್ತಿಗಳಿಗೆ ಆದ್ಯತೆ ನೀಡತಕ್ಕದ್ದು ಮತ್ತು ಈ ಪ್ರಕ್ರಿಯೆಯನ್ನು ಎ ವಲಯದಿಂದ ಆರಂಭಿಸಿ ನಿರ್ವಹಿಸತಕ್ಕದ್ದು. ಈ ಖಾಲಿ ಹುದ್ದೆಗಳನ್ನು 11ನೇ ನಿಯಮದಲ್ಲಿ ಗೊತ್ತುಪಡಿಸಲಾದಂತೆ ಗಣಕೀಕೃತ ಕೌನ್ಸಿಲಿಂಗ್ ಪ್ರಕ್ರಿಯೆಯ ಮೂಲಕ ಪ್ರಕಟಿಸತಕ್ಕದ್ದು ಮತ್ತು ಭರ್ತಿ ಮಾಡತಕ್ಕದ್ದು.

**5. ವಲಯ–ಸಿ ನಲ್ಲಿ ಕಡ್ಡಾಯ ನೇಮಕ ಮಾಡುವುದಕ್ಕೆ ಸಂಬಂಧಿಸಿದಂತೆ ಅನುಸರಿಸಬೇಕಾದ ಕಾರ್ಯವಿಧಾನ.–(1)**ವಲಯ–ಸಿ ನಲ್ಲಿ, ಭರ್ತಿ ಮಾಡಬೇಕಾಗಿರುವ ಆರಂಭಿಕ ನೇಮಕಗಳ ಸಂಖ್ಯೆಗೆ ಸಮನಾಗಿರುವಷ್ಟು ಖಾಲಿ ಹುದ್ದೆಗಳ ಸಂಖ್ಯೆಯನ್ನು ಅಧಿನಿಯಮದ 3ನೇ ಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಲಾದಂತೆ ಸೃಜಿಸತಕ್ಕದ್ದು. ಒಂದೊಮ್ಮೆ ಸಾಕಷ್ಟು ಖಾಲಿ ಹುದ್ದೆಗಳು ಲಭ್ಯವಾಗದೆ ಇದ್ದ ಸಂದರ್ಭದಲ್ಲಿ, ಭರ್ತಿ ಮಾಡಬೇಕಾದ ಹುದ್ದೆಗಳ ಸಂಖ್ಯೆಯನ್ನು 11ನೇ ನಿಯಮದಲ್ಲಿ ನಿರೂಪಿಸಲಾಗಿರುವಂತೆ ಕೌನ್ಸಿಲಿಂಗ್‌ನ ಕಾರ್ಯವಿಧಾನವನ್ನು ಅನುಸರಿಸುವ ಮೂಲಕ ಅದೇ ವೃಂದದಲ್ಲಿರುವ ಪದಧಾರಿ ಸಿಬ್ಬಂದಿಯನ್ನು ವರ್ಗಾವಣೆ ಮಾಡುವ ಮೂಲಕ ಸೃಜಿಸಬೇಕಾಗುತ್ತದೆ. ಹಾಗೆ ಸೃಜಿಸಲಾದ ಖಾಲಿ ಹುದ್ದೆಗಳ ಸಂಖ್ಯೆಯನ್ನು ಅಧಿಸೂಚಿಸಬೇಕಾಗುತ್ತದೆ ಮತ್ತು ಸಾಮಾನ್ಯ ಮಾಹಿತಿಗಾಗಿ ಈ ವಿಷಯವನ್ನು ಇಲಾಖೆಯ ವೆಬ್‌ಸೈಟ್‌ನಲ್ಲಿ ಅಪ್‌ಲೋಡ್ ಮಾಡಬೇಕಾಗುತ್ತದೆ.

(2) 11ನೇ ನಿಯಮದಲ್ಲಿ ನಿರೂಪಿಸಲಾದಂತೆ ಕಾರ್ಯವಿಧಾನವನ್ನು ಪೂರ್ಣಗೊಳಿಸಿದ ತರುವಾಯ, ಹೊಸ ನೇಮಕಗಳಿಗೆ ಸಂಬಂಧಿಸಿದ ಗಣಕೀಕೃತ ಕೌನ್ಸಿಲಿಂಗ್ ಕಾರ್ಯವಿಧಾನವನ್ನು ಜ್ಯೇಷ್ಠತೆಯ ಕ್ರಮಕ್ಕೆ ಅನುಸಾರವಾಗಿ ಕೈಗೊಳ್ಳಬೇಕಿರುತ್ತದೆ. ಆದರೆ, ದೈಹಿಕ ವಿಕಲಚೇತನ ಪ್ರವರ್ಗಕ್ಕೆ ಸೇರುವಂಥ ಅಭ್ಯರ್ಥಿಗಳ ಸಂಬಂಧದಲ್ಲಿ ಅವರ ಜ್ಯೇಷ್ಠತೆಯನ್ನು ಪರಿಗಣಿಸದೆ ಅವರಿಗೆ ಕೌನ್ಸಿಲಿಂಗ್‌ನ ಅವಕಾಶವನ್ನು ನೀಡಬೇಕಾಗಿರುತ್ತದೆ.

**6. ವಲಯ–ಸಿ ನಲ್ಲಿ ಮುಂಬಡ್ತಿ ಮೂಲಕ ಕಡ್ಡಾಯವಾಗಿ ಸ್ಥಳ ನಿಯುಕ್ತಿ ಮಾಡುವುದಕ್ಕೆ ಸಂಬಂಧಿಸಿದಂತೆ ಅನುಸರಿಸಬೇಕಾದ ಕಾರ್ಯವಿಧಾನ.–** (1) ವಲಯ–ಸಿ ನಲ್ಲಿ ಮುಂಬಡ್ತಿ ಮೂಲಕ ಭರ್ತಿ ಮಾಡಬೇಕಾಗಿರುವ ಹುದ್ದೆಗಳ ಸಂಖ್ಯೆಗೆ ಸಮನಾಗಿರುವಷ್ಟು ಹುದ್ದೆಗಳ ಸಂಖ್ಯೆಯನ್ನು ಈ ನಿಯಮಗಳ 4ನೇ ನಿಯಮದಲ್ಲಿ ನಿರೂಪಿಸಲಾಗಿರುವಂತೆ ಸೃಜಿಸತಕ್ಕದ್ದು.

(2) **ಆದ್ಯತಾ ಕ್ರಮ.–** ಗಣಕೀಕೃತ ಕೌನ್ಸಿಲಿಂಗ್ ಮೂಲಕ ಮುಂಬಡ್ತಿ ಮೇಲೆ ಸ್ಥಳ ನಿಯುಕ್ತಿ ಮಾಡಬೇಕಾಗಿರುವ ಆದ್ಯತಾ ಕ್ರಮವು ಈ ಮುಂದಿನಂತೆ ಇರತಕ್ಕದ್ದು:–

(i) ದೈಹಿಕ ವಿಕಲಚೇತರು;

(ii) ಪತಿ/ಪತ್ನಿ ಅಥವಾ ಮಕ್ಕಳ ಗಂಭೀರ ಸ್ವರೂಪದ ಕಾಯಿಲೆಗಳು;

(iii) ಪತಿ/ಪತ್ನಿ ಇಬ್ಬರೂ ಸರ್ಕಾರಿ ನೌಕರರಾಗಿರುವ ಪ್ರಕರಣ;

(iv) ವಿಧವೆ;

(v) ಸಾಮಾನ್ಯ ಪ್ರಕರಣಗಳು

**7. ವರ್ಗಾವಣೆಗಳಿಂದ ವಿನಾಯಿತಿ.–** ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ವರ್ಗಾವಣೆಗೆ ಈ ಮುಂದಿನ ಸಂದರ್ಭಗಳಲ್ಲಿ ವಿನಾಯಿತಿ ನೀಡಲಾಗಿರುತ್ತದೆ ಎಂದರೆ.–

(1) ವಯೋನಿವೃತ್ತಿಯಾಗುವುದಕ್ಕೆ ಎರಡು ವರ್ಷಗಳಿಗಿಂತ ಕಡಿಮೆ ಸೇವಾವಧಿಯನ್ನು ಹೊಂದಿರುವಂಥ ಒಬ್ಬ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು ಆತ/ಆಕೆ ಹಾಗೆ ವರ್ಗಾವಣೆ ಮಾಡುವಂತೆ ಕೋರಿದ ಹೊರತು, ಅವರ ಕಾರ್ಯನಿರ್ವಹಣಾ ವಲಯದ ಪರಿಮಿತಿಯ ಹೊರಗೆ ವರ್ಗಾವಣೆ ಮಾಡತಕ್ಕದ್ದಲ್ಲ.

(2) ಪ್ರೋಬೇಷನರಿ ಅವಧಿಯಲ್ಲಿರುವ ಯಾರೇ ಒಬ್ಬ ಸಿಬ್ಬಂದಿಯನ್ನು ಆತನ/ಆಕೆಯ ಪ್ರೋಬೇಷನರಿ ಅವಧಿಯು ತೃಪ್ತಿಕರವಾಗಿದೆ ಎಂದು ಘೋಷಿಸುವವರೆಗೆ ಅಲ್ಲಿಂದ ವರ್ಗಾವಣೆ ಮಾಡತಕ್ಕದ್ದಲ್ಲ. ಆನಂತರ ಅವರನ್ನು ಈ ನಿಯಮದ ಉಪಬಂಧಕ್ಕೆ ಒಳಪಟ್ಟು ವರ್ಗಾವಣೆ ಮಾಡತಕ್ಕದ್ದಾಗಿರುತ್ತದೆ.

(3) ಪ್ರಾಜೆಕ್ಟ್ ಅನ್ನು ಕೈಗೊಂಡಿರುವ ಯಾರೇ ಒಬ್ಬ ಬೋಧಕ ಸಿಬ್ಬಂದಿಯನ್ನು, ಗರಿಷ್ಠ ಮೂರು ವರ್ಷಗಳು ಅಥವಾ ಪ್ರಾಜೆಕ್ಟ್ ಪೂರ್ಣಗೊಳ್ಳುವವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರಗೆ ವರ್ಗಾವಣೆ ಮಾಡತಕ್ಕದ್ದಲ್ಲ (ನಮೂನೆ–7)

**8. ಸಾಮಾನ್ಯ ವರ್ಗಾವಣೆ ಅವಧಿ.–** ಎಲ್ಲಾ ವರ್ಗಾವಣೆಗಳನ್ನು ಅಂದರೆ, ಸಾರ್ವಜನಿಕ ಹಿತಾಸಕ್ತಿ ದೃಷ್ಟಿಯಿಂದ ಅಥವಾ ಕೋರಿಕೆಯ ಮೇಲೆ ಮಾಡುವಂಥ ವರ್ಗಾವಣೆಗಳನ್ನು ಕ್ಯಾಲೆಂಡರ್ ವರ್ಷದ ಮಾರ್ಚ್ ಮತ್ತು ಜೂನ್ ತಿಂಗಳ ನಡುವೆ ಅಥವಾ ಸರ್ಕಾರವು ಅಧಿಸೂಚಿಸುವುದಕ್ಕೆ ಅನುಗುಣವಾಗಿ ಮಾಡತಕ್ಕದ್ದು.

**9. ವರ್ಗಾವಣೆ ಮೇಲೆ ನಿರ್ಬಂಧ.–** (1) ವಿಶೇಷ ಪ್ರವರ್ಗದಡಿಯಲ್ಲಿ ಮಾಡಬೇಕಾಗಿರುವ ವರ್ಗಾವಣೆಗಳ ಶೇಕಡಾವಾರು ಪ್ರಮಾಣವು ಈ ಮುಂದೆ ನಿಗದಿಪಡಿಸಿದಂತೆ ಇರತಕ್ಕದ್ದು, ಎಂದರೆ:–

**ಕೋಷ್ಟಕ**

| ಕ್ರಮ ಸಂಖ್ಯೆ | ಪ್ರವರ್ಗ | ವರ್ಗಾವಣೆಗಳ ಶೇಕಡಾವಾರು ಪ್ರಮಾಣ |
|---|---|---|
| 1. | ಸಾಮಾನ್ಯ ಪ್ರಕರಣಗಳು | ಶೇ.4 |
| 2. | ಪತಿ/ಪತ್ನಿ ಪ್ರಕರಣಗಳು | ಶೇ.1 |
| 3. | ವಿಧವೆಯರ ಪ್ರಕರಣಗಳು | ಶೇ.1 |
| 4. | ದೈಹಿಕ ವಿಕಲಚೇತನರ ಪ್ರಕರಣಗಳು | ಶೇ.1 |
| 5. | ಗಂಭೀರ ಸ್ವರೂಪದ ಖಾಯಿಲೆಗಳ ಪ್ರಕರಣಗಳು | ಶೇ.1 |
| | ಒಟ್ಟು | ಶೇ.8 |

ಆದರೆ, ಮೇಲೆ ಹೇಳಿರುವ ಯಾವುದೇ ಪ್ರವರ್ಗಗಳಲ್ಲಿ (ಸಾಮಾನ್ಯ ಪ್ರಕರಣಗಳನ್ನು ಹೊರತುಪಡಿಸಿ) ಯಾರೇ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ, ಅಂಥ ಶೇಕಡಾವಾರು ಪ್ರಮಾಣವನ್ನು ಸಕ್ಷಮ ಪ್ರಾಧಿಕಾರಿಯು ಮರುಹಂಚಿಕೆ ಮಾಡತಕ್ಕದ್ದು.

**10. ನಿಗದಿಪಡಿಸಿರುವ ಸೇವಾವಧಿಗೆ ವಿನಾಯತಿ.– (1)** ವರ್ಗಾವಣೆ ಮಾಡುವ ಸಂದರ್ಭದಲ್ಲಿ ಸಾಮಾನ್ಯ ಪ್ರಕರಣಗಳನ್ನು ಹೊರತುಪಡಿಸಿ, 9ನೇ ನಿಯಮದ ಮೇರೆಗಿನ ಕೋಷ್ಟಕದ 2 ರಿಂದ 5ರವರೆಗಿನ ಬಾಬಿನಲ್ಲಿ ಪಟ್ಟಿ ಮಾಡಿರುವ ವಿಶೇಷ ಪ್ರಕರಣಗಳಿಗೆ ಸಂಬಂಧಪಟ್ಟಂತೆ ಒಂದೇ ಸ್ಥಳ ಅಥವಾ ವಲಯದಲ್ಲಿ ಸೇವೆ ಸಲ್ಲಿಸಬೇಕಾಗಿರುವ ಕನಿಷ್ಠ ಅವಧಿಗೆ 2 ವರ್ಷಗಳಷ್ಟು ವಿನಾಯಿತಿ ನೀಡಲಾಗಿದೆ.

**11. ಗಣಕೀಕೃತ ಕೌನ್ಸಿಲಿಂಗ್ ನಡೆಸುವುದಕ್ಕೆ ಸಂಬಂಧಿಸಿದಂತೆ ಅನುಸರಿಸಬೇಕಾಗಿರುವ ಕಾರ್ಯವಿಧಾನ.**–(1) ಕೋರಿಕೆಯ ಮೇಲೆ ಮತ್ತು ಸಾರ್ವಜನಿಕ ಹಿತಾಸಕ್ತಿ ದೃಷ್ಟಿಯಿಂದ ಪ್ರಾಂಶುಪಾಲರು, ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯನ್ನು ವರ್ಗಾವಣೆ ಮಾಡುವುದಕ್ಕೆ ಸಂಬಂಧಿಸಿದಂತೆ, ಗಣಕೀಕೃತ ಕೌನ್ಸಿಲಿಂಗ್ ನಡೆಸುವುದಕ್ಕಾಗಿ ಒಂದು ವೇಳಾಪಟ್ಟಿಯನ್ನು ಈ ಮುಂದೆ ಹೇಳಿರುವಂತೆ ಸಿದ್ಧಪಡಿಸಬೇಕಿರುತ್ತದೆ ಮತ್ತು ಪ್ರಕಟಿಸಿರಬೇಕಿರುತ್ತದೆ, ಎಂದರೆ:–

(ಎ) ಎಲ್ಲಾ ಪ್ರಾಂಶುಪಾಲರುಗಳು ಲಭ್ಯವಿರುವ ವಿಷಯವಾರು ಕಾರ್ಯಭಾರ, ವಿಷಯವಾರು ಮಂಜೂರು ಮಾಡಿರುವ ಸಿಬ್ಬಂದಿ ಸಂಖ್ಯೆ ಮತ್ತು ಖಾಲಿ ಇರುವ ಹುದ್ದೆಗಳ ಸಂಖ್ಯೆ ಹಾಗೂ ಇನ್ನಿತರ ವಿವರಗಳನ್ನು ನಮೂನೆ–1ರಲ್ಲಿ ಸಲ್ಲಿಸತಕ್ಕದ್ದು.

(ಬಿ) ಪ್ರಾಂಶುಪಾಲರುಗಳ ಹುದ್ದೆಗಳು, ಬೋಧಕ ಮತ್ತು ಬೋಧಕೇತರ ಹುದ್ದೆಗಳು ಖಾಲಿ ಇರುವುದನ್ನು ತಿಳಿಸುವ ಅಧಿಸೂಚನೆ ಪ್ರಕಟಿಸುವುದು (ನಮೂನೆ–2);

(ಸಿ) ಕೋರಿಕೆ ಮೇಲೆ ಮಾಡುವ ವರ್ಗಾವಣೆಗಾಗಿ ಅರ್ಜಿಗಳನ್ನು ಸಲ್ಲಿಸುವುದಕ್ಕಾಗಿ ಕೊನೆಯ ದಿನಾಂಕ ನಿಗದಿಪಡಿಸುವುದು;

(ಡಿ) ಸಲ್ಲಿಸಿದ ಅರ್ಜಿಗಳನ್ನು ಪರಿಶೀಲನೆ ಮಾಡುವುದು ಮತ್ತು ಪ್ರಮಾಣೀಕರಿಸುವುದು;

(ಇ) ತಾತ್ಕಾಲಿಕ ಅರ್ಹತಾಪಟ್ಟಿ ಪ್ರಕಟಿಸುವುದು;

(ಎಫ್) ಆಕ್ಷೇಪಣೆಗಳನ್ನು ಸಲ್ಲಿಸುವುದಕ್ಕಾಗಿ ಕೊನೆ ದಿನಾಂಕ ನಿಗದಿಪಡಿಸುವುದು;

(ಜಿ) ಅಂತಿಮ ಅರ್ಹತಾಪಟ್ಟಿ ಪ್ರಕಟಿಸುವುದು;

(2) **ವರ್ಗಾವಣೆಗಾಗಿ ಅರ್ಜಿ ಸಲ್ಲಿಸುವುದು.–** ವರ್ಗಾವಣೆ ಬಯಸುವ ಪ್ರಾಂಶುಪಾಲರು, ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳು ನಮೂನೆ–3 ರಲ್ಲಿ ಸಕ್ಷಮ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸತಕ್ಕದ್ದು. ಹಾಗೆ ಸಲ್ಲಿಸಿದ ಅರ್ಜಿಯಲ್ಲಿ ಒದಗಿಸಿರುವ ಮಾಹಿತಿಯ ಸರಿತನವನ್ನು ಸಂಬಂಧಪಟ್ಟ ವರದಿ

ಮಾಡುವ ಪ್ರಾಧಿಕಾರಿ ಪರಿಶೀಲಿಸಬೇಕಿರುತ್ತದೆ ಮತ್ತು ಪ್ರಮಾಣೀಕರಿಸಬೇಕಿರುತ್ತದೆ. ವರ್ಗಾವಣೆ ಅರ್ಜಿಯಲ್ಲಿ ಒದಗಿಸಿರುವ ಮಾಹಿತಿ ತಪ್ಪಾಗಿರುವುದಾಗಿ ಕಂಡುಬಂದರೆ, ಆಗ ಅರ್ಜಿದಾರನ ವಿರುದ್ಧ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ಅನುಸಾರ ಸೂಕ್ತ ಶಿಸ್ತು ಕ್ರಮ ಜರುಗಿಸತಕ್ಕದ್ದು. ಅರ್ಜಿಯನ್ನು ಪರಿಶೀಲನೆ ಮಾಡಿದ ತರುವಾಯ ದತ್ತಾಂಶವನ್ನು ಗಣಕೀಕರಿಸತಕ್ಕದ್ದು.

(3) **ಆದ್ಯತಾಪಟ್ಟಿ ಸಿದ್ಧಪಡಿಸುವುದು.–** (ಎ) ಯಾವುದೇ ವೃಂದಕ್ಕೆ ಸಂಬಂಧಪಟ್ಟ ಸಿಬ್ಬಂದಿಯ ಆದ್ಯತಾಪಟ್ಟಿಯನ್ನು, ಒಂದೇ ಸ್ಥಳ ಅಥವಾ ವಲಯದಲ್ಲಿ ಸೇವೆ ಸಲ್ಲಿಸಿರುವ ವರ್ಷಗಳ ಸಂಖ್ಯೆಯನ್ನು ಇಳಿಕೆ ಕ್ರಮದಲ್ಲಿ ಪರಿಗಣಿಸುವುದರ ಮೂಲಕ ಸಿದ್ಧಪಡಿಸತಕ್ಕದ್ದು. ಸೇವೆ ಸಲ್ಲಿಸಿರುವ ವರ್ಷಗಳ ಸಂಖ್ಯೆಯು ಒಂದೇ ಆಗಿದ್ದರೆ ಆಗ, ಹಿಂದೆ ಚಾಲನೆಯಾಗಿರುವ ಗ್ರೇಡೇಷನ್ ಪಟ್ಟಿಯನ್ನು ಆಧರಿಸಿದ ಜ್ಯೇಷ್ಠತೆಯನ್ನು ಪರಿಗಣಿಸತಕ್ಕದ್ದು ಮತ್ತು ಜ್ಯೇಷ್ಠತೆಯಲ್ಲಿ ಮೇಲಿರುವವನಿಗೆ ಕೌನ್ಸಿಲಿಂಗ್‌ನಲ್ಲಿ ಆದ್ಯತೆ ನೀಡಬೇಕಿರುತ್ತದೆ.

(ಬಿ) (ಎ) ಉಪನಿಯಮದ ಪ್ರಕಾರ ಯಾವುದೇ ವೃಂದಕ್ಕೆ ಸಂಬಂಧಪಟ್ಟ ಸಿಬ್ಬಂದಿಯ ಆದ್ಯತಾ ಪಟ್ಟಿಯನ್ನು ಸಿದ್ಧಪಡಿಸುವಾಗ, ಸದರಿ ಪಟ್ಟಿಯನ್ನು ಈ ಮುಂದೆ ಹೇಳಿರುವ ಆದ್ಯತೆಯ ಕ್ರಮವನ್ನು ಅನುಸರಿಸುವ ಮೂಲಕ ಸಿದ್ಧಪಡಿಸತಕ್ಕದ್ದು.

(i) ದೈಹಿಕ ವಿಕಲಚೇತನರ ಪ್ರಕರಣಗಳು;

(ii) ಪತಿ/ಪತ್ನಿ ಅಥವಾ ಮಕ್ಕಳ ಗಂಭೀರ ಸ್ವರೂಪದ ಕಾಯಿಲೆಗಳ ಪ್ರಕರಣಗಳು;

(iii) ಪತಿ/ಪತ್ನಿ ಇಬ್ಬರೂ ಸರ್ಕಾರಿ ನೌಕರರಾಗಿರುವ ಪ್ರಕರಣಗಳು;

(iv) ವಿಧವೆಯರ ಪ್ರಕರಣಗಳು;

(v) ಸಾಮಾನ್ಯ ಪ್ರಕರಣಗಳು;

(ಸಿ) ಸಕ್ಷಮ ಪ್ರಾಧಿಕಾರವು, ಮೇಲೆ ಹೇಳಿರುವ ಕಾರ್ಯವಿಧಾನಕ್ಕನುಸಾರವಾಗಿ ನಮೂನೆ–4 ರಲ್ಲಿ ತಾತ್ಕಾಲಿಕ ಆದ್ಯತಾಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ಏಳು ದಿನಗಳ ಅವಧಿಯೊಳಗಾಗಿ ಆಕ್ಷೇಪಣೆಗಳನ್ನು ಸಲ್ಲಿಸುವುದಕ್ಕಾಗಿ ವೆಬ್‌ಸೈಟ್‌ನಲ್ಲಿ ಪ್ರಕಟಿಸತಕ್ಕದ್ದು. ಪ್ರಾಂಶುಪಾಲರು, ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯಿಂದ ಆಕ್ಷೇಪಣೆಗಳನ್ನು ಸ್ವೀಕರಿಸಿದ ಮೇಲೆ, ಅವುಗಳ ಸಿಂಧುತ್ವದ ಆಧಾರದ ಮೇಲೆ ಅವುಗಳನ್ನು ಪರಿಗಣಿಸಬಹುದಾಗಿದೆ ಅಥವಾ ತಿರಸ್ಕರಿಸಬಹುದಾಗಿದೆ. ಆನಂತರ ನಮೂನೆ–5 ರಲ್ಲಿ ಅಂತಿಮ ಆದ್ಯತಾ ಪಟ್ಟಿಯನ್ನು ಪ್ರಕಟಿಸತಕ್ಕದ್ದು.

(4) **ಗಣಕೀಕೃತ ಕೌನ್ಸಿಲಿಂಗ್ ಕಾರ್ಯವಿಧಾನದ ಮೂಲಕ ಸಾರ್ವಜನಿಕ ಹಿತಾಸಕ್ತಿ ದೃಷ್ಟಿಯಿಂದ ವರ್ಗಾವಣೆಗಳನ್ನು ಮಾಡುವುದು.–** ಬೋಧಕ ಅಥವಾ ಬೋಧಕೇತರ ಸಿಬ್ಬಂದಿ ನಮೂನೆ–6 ರಲ್ಲಿ ನೋಟೀಸು ಸ್ವೀಕರಿಸಿದ ಮೇಲೆ, ಪ್ರದರ್ಶಿಸಿರುವ ಖಾಲಿ ಹುದ್ದೆಗಳನ್ನು ಹಂಚಿಕೆ ಮಾಡಿರುವ ಕಾಲಮಿತಿಯೊಳಗೆ ಆಯ್ಕೆ ಮಾಡಿಕೊಳ್ಳುವುದಕ್ಕೆ ಸಂಬಂಧಿಸಿದಂತೆ ಆದ್ಯತಾ ಕ್ರಮದಲ್ಲಿ ಕೌನ್ಸಿಲಿಂಗ್ ಕೇಂದ್ರಕ್ಕೆ ಹಾಜರಾಗತಕ್ಕದ್ದು. ಸಿಬ್ಬಂದಿಯು, ನಿಗದಿಪಡಿಸಿರುವ ಕಾಲಮಿತಿಯೊಳಗೆ ಕೌನ್ಸಿಲಿಂಗ್‌ಗೆ ಹಾಜರಾಗಲು ವಿಫಲರಾದ ಪಕ್ಷದಲ್ಲಿ ಅಥವಾ ಕೌನ್ಸಿಲಿಂಗ್‌ಗೆ ಹಾಜರಾಗಿದ್ದು ಆದರೆ ನಿಗದಿಪಡಿಸಿದ ಕಾಲಮಿತಿಯೊಳಗೆ ಯಾವುದೇ ಖಾಲಿ ಹುದ್ದೆಯನ್ನು ಆಯ್ಕೆ ಮಾಡಿಕೊಳ್ಳುವುದರಲ್ಲಿ ವಿಫಲರಾದ ಪಕ್ಷದಲ್ಲಿ, ಆಗ ಸಕ್ಷಮ ಪ್ರಾಧಿಕಾರಿಯು ಅಂಥ ಸಿಬ್ಬಂದಿಯನ್ನು ಕೌನ್ಸಿಲಿಂಗ್ ಕೊನೆಯಲ್ಲಿ ಲಭ್ಯವಿರುವ ಖಾಲಿ ಹುದ್ದೆಗೆ ವರ್ಗಾವಣೆ ಮಾಡಿ ಸ್ಥಳ ನಿಯುಕ್ತಿ ಮಾಡುವ ಅಧಿಕಾರ ಹೊಂದಿರುತ್ತಾರೆ.

(5) **ಗಣಕೀಕೃತ ಕೌನ್ಸಿಲಿಂಗ್ ಕಾರ್ಯವಿಧಾನದ ಮೂಲಕ ಕೋರಿಕೆ ಮೇಲಿನ ವರ್ಗಾವಣೆಗಳನ್ನು ಮಾಡುವುದು.–** ಅರ್ಜಿದಾರರು ನಮೂನೆ6(ಎ) ನಲ್ಲಿ ನೋಟೀಸು ಸ್ವೀಕರಿಸಿದ ಮೇಲೆ, ಕೌನ್ಸಿಲಿಂಗ್ ಕೇಂದ್ರಕ್ಕೆ ಹಾಜರಾಗತಕ್ಕದ್ದು ಮತ್ತು ಪ್ರದರ್ಶಿಸಿರುವ ಖಾಲಿ ಹುದ್ದೆಗಳಲ್ಲಿ ಯಾವುದೇ ಒಂದನ್ನು ಹಂಚಿಕೆ ಮಾಡಿರುವ ಕಾಲಮಿತಿಯೊಳಗೆ ಆಯ್ಕೆಮಾಡಿಕೊಳ್ಳತಕ್ಕದ್ದು. ಅರ್ಜಿದಾರರು ಕೌನ್ಸಿಲಿಂಗ್ ಕೇಂದ್ರಕ್ಕೆ ಹಾಜರಾಗಲು ವಿಫಲರಾದ ಪಕ್ಷದಲ್ಲಿ ಅಥವಾ ಹಾಜರಾಗಿದ್ದು ಆದರೆ ನಿಗದಿಪಡಿಸಿದ ಕಾಲಮಿತಿಯೊಳಗೆ ಖಾಲಿ ಹುದ್ದೆಯನ್ನು ಆಯ್ಕೆ ಮಾಡಿಕೊಳ್ಳುವುದರಲ್ಲಿ ವಿಫಲರಾದ ಪಕ್ಷದಲ್ಲಿ, ಆಗ ಆತ/ಆಕೆಯು ಹಾಲಿ ಕಾರ್ಯನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರಿಯತಕ್ಕದ್ದು.

(6) **ಕೌನ್ಸಿಲಿಂಗ್‌ನ ಮಾಹಿತಿ ನೀಡುವುದು.–** ಕೌನ್ಸಿಲಿಂಗ್‌ನ ದಿನಾಂಕ, ಸಮಯ ಮತ್ತು ಸ್ಥಳ ಕುರಿತ ಮಾಹಿತಿಯನ್ನು ಅರ್ಜಿದಾರನಿಗೆ ನಮೂನೆಯಲ್ಲಿ ಸ್ವೀಕೃತಿ ಪತ್ರ ಸಹಿತ ನೋಂದಾಯಿತ ಅಂಚೆ ಮೂಲಕ ತಿಳಿಸತಕ್ಕದ್ದು ಮತ್ತು ಈ ಮಾಹಿತಿಯನ್ನು ವೆಬ್‌ಸೈಟ್‌ನಲ್ಲಿ ಸಹ ಪ್ರಕಟಿಸತಕ್ಕದ್ದು.

(7) **ವೇಳಾಪಟ್ಟಿ, ನೋಟೀಸುಗಳು ಮತ್ತು ಎಲ್ಲಾ ನಮೂನೆಗಳನ್ನು ಪ್ರಕಟಿಸುವುದು.–** ಸಕ್ಷಮ ಪ್ರಾಧಿಕಾರ ಗುರುತಿಸಿರುವ ವರ್ಗಾವಣೆ ಮೂಲಕ ಭರ್ತಿ ಮಾಡಬೇಕಿರುವ ವಿಷಯವಾರು ಮತ್ತು ವೃಂದವಾರು ಖಾಲಿಹುದ್ದೆಗಳ ಪಟ್ಟಿ, ವೇಳಾಪಟ್ಟಿ, ನೋಟೀಸುಗಳು ಮತ್ತು ಎಲ್ಲಾ ನಮೂನೆಗಳನ್ನು ಯಾವಾಗ ಅವುಗಳನ್ನು ಹೊರಡಿಸಲಾಗುವುದೋ ಆಗಾಗ ಅವುಗಳನ್ನು ಎಲ್ಲಾ ಕಾಲೇಜುಗಳು, ಪ್ರಾದೇಶಿಕ ಕಚೇರಿಗಳ ಮತ್ತು ಆಯುಕ್ತರ ಕಚೇರಿಯ ಸೂಚನಾಫಲಕದಲ್ಲಿ ಪ್ರದರ್ಶಿಸತಕ್ಕದ್ದು.

(8) **ಆದೇಶಗಳನ್ನು ನೀಡುವುದು.–** ಕೌನ್ಸಿಲಿಂಗ್‌ನಲ್ಲಿ ಹುದ್ದೆಯನ್ನು ಆಯ್ಕೆ ಮಾಡಿಕೊಂಡ ಕೂಡಲೇ ಸಕ್ಷಮ ಪ್ರಾಧಿಕಾರಿಯು ಅರ್ಜಿದಾರನಿಗೆ ವರ್ಗಾವಣೆ ಆದೇಶ ನೀಡತಕ್ಕದ್ದು ಮತ್ತು ಆಯ್ಕೆ ಮಾಡಿಕೊಂಡ ಹುದ್ದೆಯನ್ನು ಖಾಲಿಹುದ್ದೆಯ ಪಟ್ಟಿಯಿಂದ ತೆಗೆಯತಕ್ಕದ್ದು. ವರ್ಗಾವಣೆ ಆದೇಶವನ್ನು ಸಂಬಂಧಪಟ್ಟ ಪ್ರಥಮದರ್ಜೆ ಕಾಲೇಜುಗಳ ಪ್ರಾಂಶುಪಾಲರಿಗೆ ಮತ್ತು ಪ್ರಾದೇಶಿಕ ಜಂಟಿ ಆಯುಕ್ತರಿಗೆ ಕಳುಹಿಸತಕ್ಕದ್ದು. ಅಲ್ಲದೆ, 7ನೇ ಉಪನಿಯಮದಲ್ಲಿ ಹೇಳಿರುವಂತೆ ಕಚೇರಿಯ ಸೂಚನಾ ಫಲಕದಲ್ಲಿ ಪ್ರಕಟಿಸತಕ್ಕದ್ದು.

**12. ಸಕ್ಷಮ ಪ್ರಾಧಿಕಾರಿಯ ಅಧಿಕಾರಗಳು.–** ಸಕ್ಷಮ ಪ್ರಾಧಿಕಾರಿಯು ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು ಈ ಮುಂದಿನ ಸಂದರ್ಭಗಳಲ್ಲಿ ಶೈಕ್ಷಣಿಕ ವರ್ಷಾವಧಿಯುದ್ದಕ್ಕೂ ವರ್ಗಾವಣೆ ಮಾಡಬಹುದಾಗಿದೆ, ಅವುಗಳೆಂದರೆ:–

(1) ಈ ನಿಯಮಗಳಲ್ಲಿ ಏನೇ ಎದ್ದರೂ, ಯಾರೇ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು ಅವರ ವಿರುದ್ಧ ಸ್ವೀಕರಿಸಲಾದ

(ಎ) ದುರ್ವತನೆ ಅಥವಾ ಅನುಚಿತ ನಡವಳಿಕೆಯ ದೂರು;

(ಬಿ) ಹಣಕಾಸು ಅಕ್ರಮಗಳ ದೂರುಗಳ–

ಮೇಲೆ 3ನೇ ಪ್ರಕರಣದ (3)ನೇ ಉಪ ಪ್ರಕರಣದ (ಸಿ) ಖಂಡಕ್ಕನುಸಾರವಾಗಿ ವಲಯ–ಸಿ ನಲ್ಲಿನ ಯಾವುದೇ ಸ್ಥಳಕ್ಕೆ ವರ್ಗಾವಣೆ ಮಾಡಬಹುದಾಗಿದೆ ಅಥವಾ ನಿಯೋಜಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)

ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

**ನಮೂನೆ–1**

**[ನೋಡಿ ನಿಯಮ 11(1)(ಎ)]**

**ಸಂಬಂಧಪಟ್ಟ ಸರ್ಕಾರಿ ಪದವಿ ಕಾಲೇಜಿನ ಪ್ರಾಂಶುಪಾಲರು ಕಳುಹಿಸಿಕೊಡಬೇಕಿರುವ ಕಾರ್ಯಭಾರ**

**ವಿವರಣಾ ಪಟ್ಟಿ**

**ಕಾಲೇಜಿನ ಹೆಸರು--------------------**

| ಕ್ರಮ ಸಂಖ್ಯೆ | ಕಾಂಬಿನೇಷನ್ | ವಿಷಯ | ಕಾಂಬಿನೇಷನ್ ಪ್ರಕಾರ ವಿದ್ಯಾರ್ಥಿ ಸಂಖ್ಯೆ | ವಿಶ್ವವಿದ್ಯಾಲಯದ ಪ್ರಕಾರ ನಿರ್ವಹಿಸ ಬೇಕಾಗಿರುವ ವಾರದ ಕಾರ್ಯ ಭಾರ | | | ಪ್ರಸ್ತುತ ಕಾಲೇಜಿನಲ್ಲಿ ವಾರವೊಂದಕ್ಕೆ ಇರುವ ಕಾರ್ಯ ಭಾರ | | | ಕಾರ್ಯಭಾರದ ಹಂಚಿಕೆ | | | | ಹಂಚಿಕೆಯ ಒಟ್ಟು ಕಾರ್ಯಭಾರ | ಇತರ ಕಾಲೇಜುಗಳು/ ಇಲಾಖೆಗಳಿಗೆ ಪ್ರತಿನಿಯೋಜನೆ ಮೇಲೆ ಇರುವ ಮತ್ತು ಎಫ್‌ಐಪಿ ಮೇರೆಗೆ ಉನ್ನತ ವ್ಯಾಸಂಗಕ್ಕಾಗಿ ಪ್ರತಿ ನಿಯೋಜನೆ ಮೇಲೆ ಇರುವ 11ನೇ ಕಾಲಂನಲ್ಲಿ ಹೇಳಿರುವ ಬೋಧಕ ಸಿಬ್ಬಂದಿಯ ವಿವರಗಳು | ಷರಾ |
|---|---|---|---|---|---|---|---|---|---|---|---|---|---|---|---|---|
| | | | | ಥಿಯರಿ | ಪ್ರಾಕ್ಟಿಕಲ್ | ಒಟ್ಟು | ಥಿಯರಿ | ಪ್ರಾಕ್ಟಿಕಲ್ | ಒಟ್ಟು | ಬೋಧಕ ಸಿಬ್ಬಂದಿಯ ಹೆಸರು ಮತ್ತು ಪದನಾಮ | ಜನ್ಮ ದಿನಾಂಕ | ಈ ಕಾಲೇಜಿನಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡ ದಿನಾಂಕ | ವಾರವೊಂದಕ್ಕೆ ಹಂಚಿಕೆ ಮಾಡಿರುವ ಕಾರ್ಯಭಾರ | | | |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** | **14** | **15** | **16** | **17** |
| | | | | | | | | | | | | | | | | |

**ನಮೂನೆ–2**

[ನೋಡಿ ನಿಯಮ 11 (1)(ಬಿ)]

**ಕಾಲೇಜು ಶಿಕ್ಷಣ ಇಲಾಖೆಯ ಖಾಲಿ ಹುದ್ದೆಗಳು**

ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರು, ವರ್ಗಾವಣೆ ಮತ್ತು ಕೌನ್ಸಿಲಿಂಗ್‌ಗೆ ಲಭ್ಯವಿರುವ ಖಾಲಿ ಹುದ್ದೆಗಳನ್ನು ಕರ್ನಾಟಕ ಸಿವಿಲ್ ಸೇವಾ (ಕಾಲೇಜುಗಳ ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆಗಳ ವಿನಿಯಮ) ನಿಯಮಗಳು, 2014ರ ಮೇರೆಗೆ ಈ ಮೂಲಕ ಅಧಿಸೂಚಿಸುವರು

| ಕ್ರಮಸಂಖ್ಯೆ | ಕಾಲೇಜಿನ ಹೆಸರು | ಖಾಲಿ ಹುದ್ದೆಯ ಹೆಸರು | ಖಾಲಿ ಹುದ್ದೆ ಉಂಟಾಗಲು ಕಾರಣ |
|---|---|---|---|
| | | | |
| | | | |
| | | | |
| | | | |
| | | | |
| | | | |

ದಿನಾಂಕ

ಕಾಲೇಜು ಶಿಕ್ಷಣ ಆಯುಕ್ತರು

**ನಮೂನೆ–3**

[ನೋಡಿ ನಿಯಮ 11(2)]

**ಕಾಲೇಜು ಶಿಕ್ಷಣ ಇಲಾಖೆ**

**20–––– ಮತ್ತು 20–––––– ನೇ ಸಾಲಿಗೆ ಸಂಬಂಧಿಸಿದ ಸಾಮಾನ್ಯ ವರ್ಗಾವಣೆ ಅರ್ಜಿ**

| | | | | |
|---|---|---|---|---|
| 1 | ಅರ್ಜಿದಾರನ ಹೆಸರು | | | |
| 2 | ಪದನಾಮ(ಬೋಧಕ ಸಿಬ್ಬಂದಿಯಾಗಿದ್ದ ಪಕ್ಷದಲ್ಲಿ ವಿಷಯದ ಹೆಸರನ್ನು ನಮೂದಿಸಬೇಕು) | | | |
| 3. | ಈ ಕಾಲೇಜು/ಕಚೇರಿಯಲ್ಲಿ ಕಾರ್ಯ ನಿರ್ವಹಿಸಲು ಆರಂಭಿಸಿದ ದಿನಾಂಕ | | | |
| 4. | ಜನ್ಮ ದಿನಾಂಕ | | | |
| 5 | ಈ ಸ್ಥಳದಲ್ಲಿ ಕಾರ್ಯನಿರ್ವಹಿಸಲು ಆರಂಭಿಸಿದ ದಿನಾಂಕ (ವೃಂದವನ್ನು ಪರಿಗಣನೆಗೆ ತೆಗೆದುಕೊಳ್ಳದೆ) | | | |
| 6. | ಹಿಂದಿನಿಂದ ಈ ದಿನಾಂಕದವರೆಗೆ ಸಲ್ಲಿಸಿರುವ ಸೇವಾ ವಿವರಗಳು | ಹಿಂದೆ ಸೇವೆ ಸಲ್ಲಿಸಿದ ಸ್ಥಳ | ಇಂದ | ವರೆಗೆ |
| | | | | |

| | | |
|---|---|---|
| 7 | **ವರ್ಗಾವಣೆ ಕೋರಿರುವ ಸ್ಥಳಗಳು** | **1.**<br>**2.**<br>**3.** |
| 8 | **ವರ್ಗಾವಣೆಗೆ ಕಾರಣಗಳು** | **(ಎ) ತನಗೆ /ಪತಿ ಅಥವಾ ಪತ್ನಿಗೆ/ಮಕ್ಕಳಿಗೆ ಇರುವ ಗಂಭೀರ ಸ್ವರೂಪದ ಕಾಯಿಲೆಗಳು**<br>**(ಬಿ) ವಿಕಲಚೇತನ**<br>**(ಸಿ) ವಿಧವೆ**<br>**(ಡಿ) ಪತಿ/ಪತ್ನಿ ಇಬ್ಬರೂ ಸರ್ಕಾರಿ ನೌಕರರಾಗಿರುವ ಪ್ರಕರಣಗಳು**<br>**(ಇ) ಸಾಮಾನ್ಯ ವರ್ಗಾವಣೆ ಪ್ರಕರಣಗಳು** |

ಎ. ಗಂಭೀರ ಸ್ವರೂಪದ ಕಾಯಿಲೆಗಳು (i)

ಹೆಸರು

ಕಾಯಿಲೆಗಳ ಸ್ವರೂಪ

----ವರ್ಷಗಳಿಂದ ತೊಂದರೆ ಅನುಭವಿಸಲಾಗುತ್ತಿದೆ

**ವೈದ್ಯಕೀಯ ಮಂಡಲಿಯ ಪ್ರಮಾಣಪತ್ರ**

ನಾನು, ಶ್ರೀ/ಶ್ರೀಮತಿ ----------ವಯಸ್ಸು ಸುಮಾರು ------------ಇವರು ಕರ್ನಾಟಕ ಸಿವಿಲ್ ಸೇವಾ (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆಗಳ ವಿನಿಯಮ) ನಿಯಮಗಳು, 2013ರಲ್ಲಿ ಪರಿಭಾಷಿಸಿರುವ ಗಂಭೀರ ಸ್ವರೂಪದ ಕಾಯಿಲೆ (i)ರ-------- ರೋಗದಿಂದ ತೊಂದರೆಗೊಳಗಾಗಿದ್ದಾರೆಂದು ಪ್ರಮಾಣೀಕರಿಸುತ್ತೇನೆ.

<u>ಲಗತ್ತಿಸಿರುವ ವೈದ್ಯಕೀಯ ದಾಖಲೆಗಳು</u>

1.

2.

3.

ಅಲ್ಲದೆ, ಸರ್ಕಾರಿ ನೌಕರ ಕಾರ್ಯನಿರ್ವಹಿಸುತ್ತಿರುವ ಈ ಸ್ಥಳದಲ್ಲಿ ಚಿಕಿತ್ಸೆ ಲಭ್ಯವಿಲ್ಲವೆಂದು ಸಹ ಪ್ರಮಾಣೀಕರಿಸಲಾಗಿದೆ. ಈಗ ಕಾರ್ಯನಿರ್ವಹಿಸುತ್ತಿರುವ ಸ್ಥಳಕ್ಕೆ ಸಮೀಪದಲ್ಲಿ ಚಿಕಿತ್ಸೆ ಲಭ್ಯವಿರುವ ಸ್ಥಳವನ್ನು ಕೆಳಗೆ ಉಲ್ಲೇಖಿಸಲಾಗಿದೆ.

1.

2.

**ಜಿಲ್ಲಾ ವೈದ್ಯಕೀಯ ಮಂಡಲಿ**

**(ಸಹಿ ಮತ್ತು ಮೊಹರು)**

ಗಂಭೀರ ಸ್ವರೂಪದ ಕಾಯಿಲೆಗಳು(ii)

ಹೆಸರು

ಪತ್ನಿ/ಮಗ/ಮಗಳು

ಕಾಯಿಲೆಯ ಸ್ವರೂಪ

**ವೈದ್ಯಕೀಯ ಮಂಡಲಿಯ ಪ್ರಮಾಣಪತ್ರ**

ನಾವು, ಶ್ರೀ/ಶ್ರೀಮತಿ----------ವಯಸ್ಸು ಸುಮಾರು -------- ಶ್ರೀ/ಶ್ರೀಮತಿ --------ಇವರ ಪತ್ನಿ/ಮಗ/ಮಗಳು ಇವರು, ಕರ್ನಾಟಕ ಸಿವಿಲ್ ಸೇವಾ (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆಗಳ ವಿನಿಯಮ) ನಿಯಮಗಳು, 2013ರಲ್ಲಿ ಪರಿಭಾಷಿಸಿರುವ ಗಂಭೀರ ಸ್ವರೂಪದ ಕಾಯಿಲೆ(ಬ)ರ ---------ರೋಗದಿಂದ ತೊಂದರೆಗೊಳಗಾಗಿದ್ದಾರೆಂದು ಪ್ರಮಾಣೀಕರಿಸಿದ್ದೇವೆ.

ಲಗತ್ತಿಸಿರುವ ವೈದ್ಯಕೀಯ ದಾಖಲೆಗಳು

1.

2.

3.

ಅಲ್ಲದೆ, ಸರ್ಕಾರಿ ನೌಕರ ಕಾರ್ಯನಿರ್ವಹಿಸುತ್ತಿರುವ ಈ ಸ್ಥಳದಲ್ಲಿ ಚಿಕಿತ್ಸೆ ಲಭ್ಯವಿಲ್ಲವೆಂದು ಸಹ ಪ್ರಮಾಣೀಕರಿಸಲಾಗಿದೆ. ಈಗ ಕಾರ್ಯನಿರ್ವಹಿಸುತ್ತಿರುವ ಸ್ಥಳಕ್ಕೆ ಸಮೀಪದಲ್ಲಿ ಚಿಕಿತ್ಸೆ ಲಭ್ಯವಿರುವ ಸ್ಥಳವನ್ನು ಕೆಳಗೆ ಉಲ್ಲೇಖಿಸಲಾಗಿದೆ.

1.

2.

**ಜಿಲ್ಲಾ ವೈದ್ಯಕೀಯ ಮಂಡಲಿ**

**(ಸಹಿ ಮತ್ತು ಮೊಹರು)**

**ಬಿ. ದೈಹಿಕ/ಮಾನಸಿಕ ವಿಕಲಚೇತನರು**

ವಿಕಲತೆಯನ್ನು ಸೂಚಿಸುವ ಇತ್ತೀಚಿನ ಭಾವಚಿತ್ರವನ್ನು ಇಲ್ಲಿ ಅಂಟಿಸಬೇಕು ಮತ್ತು ಇದಕ್ಕೆ ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕರು/ಸಿಎಂಒ/ ಮುಖ್ಯಸ್ಥರು ಯುಕ್ತವಾಗಿ ದೃಢೀಕರಿಸಬೇಕು.(ಮೊಹರಿನೊಂದಿಗೆ)

ಪ್ರಮಾಣಪತ್ರ ಸಂಖ್ಯೆ

ದಿನಾಂಕ:

ಶ್ರೀ/ಶ್ರೀಮತಿ -------ರವರ ಮಗ/ಮಗಳಾದ ಶ್ರೀ/ಶ್ರೀಮತಿ ------ವಯಸ್ಸು ------ಪುರುಷ/ ಸ್ತ್ರೀ, ನೋಂದಣಿ ಸಂಖ್ಯೆ ------ ಇವರು------ಕಾಯಿಲೆಗೆ ಒಳಗಾಗಿದ್ದಾರೆಂದು ಪ್ರಮಾಣೀಕರಿಸಲಾಗಿದೆ. ಈತ/ಈಕೆ, ದೈಹಿಕ ವಿಕಲಚೇತನರು/ ದೃಷ್ಟಿ ವಿಕಲಚೇತನರು/ ವಾಕ್ ಮತ್ತು ಶ್ರವಣ ವಿಕಲಚೇತನರು/ ಮಾನಸಿಕ ಅಸ್ವಸ್ಥತೆಯುಳ್ಳವರು/ ವಾಸಿಯಾಗುವ ಕುಷ್ಠರೋಗವುಳ್ಳವರು ಮತ್ತು ಈತ/ಈಕೆಯು -----------ಕಾಯಿಲೆಗೆ ಸಂಬಂಧಿಸಿದಂತೆ ಶೇ---ರಷ್ಟು) ಖಾಯಂ ( ದೈಹಿಕ ನ್ಯೂನತೆ/ದೃಷ್ಟಿ ನ್ಯೂನತೆ/ ವಾಕ್ ಮತ್ತು ಶ್ರವಣ ನ್ಯೂನತೆ ಮೊದಲಾದವುಗಳನ್ನು) ಹೊಂದಿದ್ದಾರೆ.

**ಟಿಪ್ಪಣಿ:**

ಈ ಪರಿಸ್ಥಿತಿಯು ಸುಧಾರಣೆಯಾಗುವಂಥಹದ್ದು/ ಸುಧಾರಣೆಯಾಗುವಂಥಹದ್ದಲ್ಲ /ಸುಧಾರಣೆಯಾಗುವ ಸಂಭವವಿದೆ/ಸುಧಾರಣೆಯಾಗುವ ಸಂಭವ ಇಲ್ಲ*

(ಅನ್ವಯಿಸದಿರುವುದನ್ನು ಹೊಡೆದುಹಾಕಿ)

| | | |
|---|---|---|
| ವೈದ್ಯರ ಸಹಿ<br>ವೈದ್ಯರ ಹೆಸರು<br>ವಿಶೇಷ ಪರಿಣತಿ ಕ್ಷೇತ್ರ<br>ಪದವಿ ಮತ್ತು ಮೊಹರು<br>(ಸದಸ್ಯ, ವೈದ್ಯಕೀಯ ಮಂಡಲಿ) | ವೈದ್ಯರ ಸಹಿ<br>ವೈದ್ಯರ ಹೆಸರು<br>ವಿಶೇಷ ಪರಿಣತಿ ಕ್ಷೇತ್ರ<br>ಪದವಿ ಮತ್ತು ಮೊಹರು<br>(ಸದಸ್ಯ, ವೈದ್ಯಕೀಯ ಮಂಡಲಿ) | ವೈದ್ಯರ ಸಹಿ<br>ವೈದ್ಯರ ಹೆಸರು<br>ವಿಶೇಷ ಪರಿಣತಿ ಕ್ಷೇತ್ರ<br>ಪದವಿ ಮತ್ತು ಮೊಹರು<br>(ಸದಸ್ಯ, ವೈದ್ಯಕೀಯ ಮಂಡಲಿ) |

ರೋಗಿಯ ಸಹಿ/ ಎಡಗೈ ಹೆಬ್ಬೆರಳಿನ ಮುದ್ರೆ

**ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕರ/ಸಿಎಂಒ/ ಮುಖ್ಯಸ್ಥರ**

**ಮೇಲುರುಜು ಮತ್ತು ಮೊಹರು**

ಸಿ. ವಿಧವೆ:

---------ಆದ ನಾನು, ನನ್ನ ಪತಿಯು ಮೃತರಾಗಿದ್ದಾರೆ ಮತ್ತು ಇಂದಿನ ದಿನಾಂಕದವರೆಗೆ ನಾನು ಮರು ಮದುವೆಯಾಗಿರುವುದಿಲ್ಲ ಹಾಗೂ ಮೇಲಿನ ವಿಷಯವನ್ನು ಸಮರ್ಥಿಸುವುದಕ್ಕೆ ಸಂಬಂಧಿಸಿದಂತೆ ನಾನು ಸಕ್ಷಮ ಪ್ರಾಧಿಕಾರಿಯಿಂದ ಪಡೆದುಕೊಂಡಿರುವ ಪ್ರಮಾಣಪತ್ರವನ್ನು ಲಗತ್ತಿಸಿರುತ್ತೇನೆಂದು ಹೇಳುತ್ತೇನೆ.

*ಲಗತ್ತು:* ತಹಶೀಲ್ದಾರರ ಪ್ರಮಾಣಪತ್ರ

ಸಹಿ

ಡಿ. ಪತಿ/ಪತ್ನಿ ಪ್ರಕರಣಗಳು

1. ಸರ್ಕಾರಿ ಸಿಬ್ಬಂದಿಯ ಹೆಸರು ---------
2. ಪತಿ/ಪತ್ನಿಯ ಹೆಸರು -------------
3. ----------ಸ್ಥಳದಲ್ಲಿ ------ಆಗಿ--------ವರ್ಷಗಳಿಂದ ಕಾರ್ಯನಿರ್ವಹಿಸಲಾಗುತ್ತಿದೆ.
4. ನೌಕರನ ಸಂಕೇತಸಂಖ್ಯೆ --------/ಕೆಜಿಐಡಿ ಸಂಖ್ಯೆ -----/ ಮೆಟಲ್ ಸಂಖ್ಯೆ -----------

**ವರದಿ ಮಾಡುವ ಪ್ರಾಧಿಕಾರ ನೀಡುವ ಪ್ರಮಾಣಪತ್ರ**

ನಾನು, ಶ್ರೀ/ಶ್ರೀಮತಿ ---------ಶ್ರೀ/ಶ್ರೀಮತಿ --------ರವರ ಪತ್ನಿ/ಪತಿ --------ಆಗಿ ----ವರ್ಷಗಳಿಂದ --------ನಲ್ಲಿರುವ ಈ ಕಚೇರಿ/ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಅರ್ಜಿದಾರನ ಹೆಸರು

ನಾನು, ಮೇಲೆ ಹೇಳಿರುವ ವಿವರಗಳು ಅರ್ಜಿದಾರನ ಸೇವಾ ವಹಿ ಮತ್ತು ದಾಖಲೆಗಳ ಪ್ರಕಾರ ಸರಿಯಾಗಿವೆ ಮತ್ತು ಸಮರ್ಪಕವಾಗಿವೆ ಎಂದು ಪ್ರಮಾಣೀಕರಿಸುತ್ತೇನೆ. ನಾನು ಪರಿಶೀಲನೆ ಮಾಡಿರುತ್ತೇನೆ.

ದಿನಾಂಕ

ಪ್ರಾಂಶುಪಾಲರ ಸಹಿ ಮತ್ತು ಮೊಹರು

**ಸೂಚನೆ:**

1. ವಿಶೇಷ ಪ್ರಕರಣಗಳ ಮೇರೆಗೆ ವರ್ಗಾವಣೆ ಕೋರುವ ಸಿಬ್ಬಂದಿಯು, (ಎ). 1ನೇ ಅಥವಾ 2ನೇ ಗಂಭೀರ ಸ್ವರೂಪದ ಕಾಯಿಲೆಗಳ ಪ್ರಮಾಣಪತ್ರ (ಬಿ) .ದೈಹಿಕ ವಿಕಲಚೇತನ ಪ್ರಮಾಣಪತ್ರ (ಸಿ). ವಿಧವಾ ಪ್ರಮಾಣಪತ್ರ (ಡಿ). ಪತಿ/ಪತ್ನಿ ಪ್ರಕರಣಗಳ ಪ್ರಮಾಣಪತ್ರಗಳನ್ನು ಲಗತ್ತಿಸತಕ್ಕದ್ದು.
2. ಸರಿಯಾದ ವಿಧಾನದಲ್ಲಿ ಸ್ವೀಕರಿಸುವ ಅರ್ಜಿಯನ್ನು ಮಾತ್ರ ಪರಿಗಣಿಸಲಾಗುವುದು.

**ನಮೂನೆ-4**

**[ನೋಡಿ ನಿಯಮ 11 (3)(ಸಿ)]**

**ತಾತ್ಕಾಲಿಕ ಆದ್ಯತಾ ಪಟ್ಟಿ**

ಕಾಲೇಜು ಶಿಕ್ಷಣ ಆಯುಕ್ತರು ನಿಯಮ 11(1) (ಇ) ಮೂಲಕ ನಿಯಮ 11 (3)ರ ಮೇರೆಗೆ ಸಿದ್ಧಪಡಿಸಿರುವ ತಾತ್ಕಾಲಿಕ ಅರ್ಹತಾ ಪಟ್ಟಿಯನ್ನು ಪ್ರಕಟಿಸಿರುತ್ತಾರೆ ಮತ್ತು ಈ ಪಟ್ಟಿಗೆ ಸಂಬಂಧಿಸಿದ ಯಾವುದೇ ಆಕ್ಷೇಪಣೆಯನ್ನು ಕಾಲೇಜು ಶಿಕ್ಷಣ ಆಯುಕ್ತರ ಕಚೇರಿ, ಅರಮನೆ ರಸ್ತೆ, ಬೆಂಗಳೂರು-560001 ಇಲ್ಲಿಗೆ --------------- ರಂದು ಅಥವಾ ಮುಂಚಿತವಾಗಿ ಸಲ್ಲಿಸಬಹುದು. ------ರ ನಂತರ ಸ್ವೀಕರಿಸುವ ಯಾವುದೇ ಆಕ್ಷೇಪಣೆಯನ್ನು ತಿರಸ್ಕರಿಸಲಾಗುವುದು.

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು | ಖಾಲಿ ಹುದ್ದೆಯ ಹೆಸರು | ಖಾಲಿ ಹುದ್ದೆ ಉಂಟಾದ ಕಾರಣ | ಪ್ರವರ್ಗ |
|---|---|---|---|---|
| | | | | |
| | | | | |
| | | | | |
| | | | | |
| | | | | |

| | | | | |
|---|---|---|---|---|
| | | | | |
| | | | | |
| | | | | |
| | | | | |
| | | | | |
| | | | | |
| | | | | |
| | | | | |
| | | | | |
| | | | | |
| | | | | |
| | | | | |
| | | | | |
| | | | | |
| | | | | |
| | | | | |

**ದಿನಾಂಕ**

**ಕಾಲೇಜು ಶಿಕ್ಷಣ ಆಯುಕ್ತರು**

**ನಮೂನೆ–5**

**[ನೋಡಿ ನಿಯಮ 11(3)(ಸಿ)]**

**ಕೌನ್ಸಿಲಿಂಗ್‌ಗಾಗಿ ಅಂತಿಮ ಅರ್ಹತಾ ಪಟ್ಟಿ**

ಕಾಲೇಜು ಶಿಕ್ಷಣ ಆಯುಕ್ತರು, ನಿಯಮ ನಿಯಮ 11(1)(ಜಿ) ಮೂಲಕ ನಿಯಮ11(3)ರ ಮೇರೆಗೆ ಸಿದ್ಧಪಡಿಸಿರುವ ಅಂತಿಮ ಅರ್ಹತಾ ಪಟ್ಟಿಯನ್ನು ಪ್ರಕಟಿಸಿರುತ್ತಾರೆ ಮತ್ತು ನಿಯಮ 11 (6)ರ ಮೇರೆಗೆ ಸ್ವೀಕೃತಿ ಪತ್ರ ಸಹಿತ ನೋಂದಾಯಿತ ಅಂಚೆ ಮೂಲಕ ಈ ಮುಂದಿನ ಅರ್ಜಿದಾರರಿಗೆ ನೋಟೀಸುಗಳನ್ನು ನೀಡಿರುತ್ತಾರೆ.

| ಕ್ರಮ ಸಂಖ್ಯೆ | ಅರ್ಜಿದಾರರ ಹೆಸರು | ವಿಷಯ/ವೃಂದ | ಕಾರ್ಯನಿರ್ವಹಣಾ ಸ್ಥಳ (ಕಾಲೇಜು/ಕಚೇರಿ) |
|---|---|---|---|
| | | | |
| | | | |
| | | | |
| | | | |
| | | | |
| | | | |
| | | | |
| | | | |
| | | | |
| | | | |
| | | | |
| | | | |

ದಿನಾಂಕ:

**ಕಾಲೇಜು ಶಿಕ್ಷಣ ಆಯುಕ್ತರು**

**ನಮೂನೆ-6**

**[ನೋಡಿ ನಿಯಮ 11(4)]**

**ಕೌನ್ಸಿಲಿಂಗ್‌ಗೆ ನೋಟೀಸು**

ನಿಯಮ 11 ರ ಮೂಲಕ ಪ್ರಕಟಿಸಿರುವ ಅಂತಿಮ ಅರ್ಹತಾ ಪಟ್ಟಿಯಲ್ಲಿ ನಿಮ್ಮ ಅರ್ಹತೆಯು ---ಆಗಿದೆಯೆಂದು ನಿಮಗೆ ಈ ಮೂಲಕ ತಿಳಿಸಲಾಗುತ್ತಿದೆ ಮತ್ತು ನೀವು ------ ದಿನ -----ತಿಂಗಳು -----------ವರ್ಷದಂದು --------ಕಚೇರಿ(ವಿಳಾಸ) ಇಲ್ಲಿ ಬೆಳಿಗ್ಗೆ/ಮಧ್ಯಾಹ್ನ -------- ರ ವೇಳೆಗೆ ಕೌನ್ಸಿಲಿಂಗ್‌ಗೆ ಹಾಜರಾಗುವಂತೆ ಸೂಚಿಸಲಾಗಿದೆ.

| ಕ್ರಮ ಸಂಖ್ಯೆ | ಅರ್ಜಿದಾರನ ಹೆಸರು | ವಿಷಯ/ವೃಂದ | ಕಾರ್ಯನಿರ್ವಹಣಾ ಸ್ಥಳ (ಕಾಲೇಜು/ಕಚೇರಿ) |
|---|---|---|---|
| | | | |
| | | | |
| | | | |
| | | | |
| | | | |
| | | | |
| | | | |
| | | | |
| | | | |
| | | | |
| | | | |
| | | | |

ದಿನಾಂಕ:

**ಕಾಲೇಜು ಶಿಕ್ಷಣ ಆಯುಕ್ತರು**

**ನಮೂನೆ-6(ಎ)**

**(ನೋಡಿ ನಿಯಮ 11(5)]**

**ಕೌನ್ಸಿಲಿಂಗ್‌ಗೆ ನೋಟೀಸು**

ನಿಯಮ 11 ರ ಮೂಲಕ ಪ್ರಕಟಿಸಿರುವ ಅಂತಿಮ ಅರ್ಹತಾ ಪಟ್ಟಿಯಲ್ಲಿ ನಿಮ್ಮ ಅರ್ಹತೆಯು ---ಆಗಿದೆಯೆಂದು ನಿಮಗೆ ಈ ಮೂಲಕ ತಿಳಿಸಲಾಗುತ್ತಿದೆ ಮತ್ತು ನೀವು ------ ದಿನ -----ತಿಂಗಳು -----------ವರ್ಷದಂದು --------ಕಚೇರಿ(ವಿಳಾಸ) ಇಲ್ಲಿ ಬೆಳಿಗ್ಗೆ/ಮಧ್ಯಾಹ್ನ ---------ರ ವೇಳೆಗೆ ಕೌನ್ಸಿಲಿಂಗ್‌ಗೆ ಹಾಜರಾಗುವಂತೆ ಸೂಚಿಸಲಾಗಿದೆ.

| ಕ್ರಮ ಸಂಖ್ಯೆ | ಅರ್ಜಿದಾರನ ಹೆಸರು | ವಿಷಯ/ವೃಂದ | ಕಾರ್ಯನಿರ್ವಹಣಾ ಸ್ಥಳ (ಕಾಲೇಜು/ಕಚೇರಿ) |
|---|---|---|---|
| | | | |
| | | | |
| | | | |
| | | | |
| | | | |
| | | | |
| | | | |
| | | | |
| | | | |
| | | | |
| | | | |
| | | | |

ದಿನಾಂಕ:

**ಕಾಲೇಜು ಶಿಕ್ಷಣ ಆಯುಕ್ತರು**

ನಮೂನೆ-7

[ನೋಡಿ ನಿಯಮ 7(3)]

**ಕಾಲೇಜು ಶಿಕ್ಷಣ ಇಲಾಖೆ**

**ಕಾಲೇಜಿನ ಹೆಸರು:**

**ಪ್ರಾಜೆಕ್ಟ್ ವಹಿಸಿಕೊಂಡಿರುವ ಉಪನ್ಯಾಸಕರ ವಿವರಗಳನ್ನು ತೋರಿಸುವ ನಮೂನೆ**

| ಕ್ರಮ ಸಂಖ್ಯೆ | ಹೆಸರು ಮತ್ತು ಪದನಾಮ | ವಿಷಯ | ಜನ್ಮ ದಿನಾಂಕ | ಕಾರ್ಯ ನಿರ್ವಹಿಸಲು ಆರಂಭಿಸಿದ ದಿನಾಂಕ | ನೀಡಿರುವ ಪ್ರಾಜೆಕ್ಟ್ (ಚಿಕ್ಕದು/ ದೊಡ್ಡದು) ಮತ್ತು ಅದರ ಅವಧಿಯ ವಿವರಗಳು | ಯುಜಿಸಿ/ ರಾಜ್ಯ ಸರ್ಕಾರ ಶಾಸನಾತ್ಮಕ ಸಂಸ್ಥೆಗಳಲ್ಲಿ ಯಾವುದು ವಹಿಸಿಕೊಟ್ಟಿದೆ | ಯುಜಿಸಿ / ರಾಜ್ಯ ಸರ್ಕಾರ/ ಶಾಸನಾತ್ಮಕ ಸಂಸ್ಥೆಗಳ ಮೂಲಕ ಹಂಚಿಕೆ ಮಾಡಿರುವ ಮೊತ್ತ | ಷರಾ |
|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** |

ದಿನಾಂಕ:

**ಕಾಲೇಜು ಶಿಕ್ಷಣ ಆಯುಕ್ತರು**

# ವಿಶೇಷ ರಾಜ್ಯ ಪತ್ರಿಕೆ

| ಭಾಗ- IVA | ಬೆಂಗಳೂರು, ಶುಕ್ರವಾರ, ಜನವರಿ ೦೨, ೨೦೧೫ (ಪುಷ್ಯ ೧೨, ಶಕ ವರ್ಷ ೧೯೩೬) | ನಂ. ೨ |
|---|---|---|
| Part- IVA | Bengaluru, Friday, January 02, 2015 (Pushya 12, Shaka Varsha 1936) | No. 2 |

**ಶಿಕ್ಷಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ ಇಡಿ 300 ಡಿಸಿಇ 2013 (ಪಿ), ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2014**

ಕರ್ನಾಟಕ ಶಿಕ್ಷಣ ಇಲಾಖಾ ಸೇವಾ (ಕಾಲೇಜು ಶಿಕ್ಷಣ ಇಲಾಖೆ) (ನೇಮಕಾತಿ) (ವಿಶೇಷ) ನಿಯಮಗಳು, 2014ರ ಕರಡನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡಂತೆ 3ನೇ ಪ್ರಕರಣದ (1)ನೇ ಉಪ-ಪ್ರಕರಣ ಮತ್ತು ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡವು ಅಗತ್ಯಪಡಿಸಿದಂತೆ, ದಿನಾಂಕ: 21ನೇ ಆಗಸ್ಟ್ 2014ರ ಕರ್ನಾಟಕ ರಾಜ್ಯಪತ್ರದ ಭಾಗ- IV(ಎ)ನಲ್ಲಿ ಅಧಿಸೂಚನೆ ಸಂಖ್ಯೆ ಇಡಿ 300 ಡಿಸಿಇ 2010 (ಪಿ) ದಿನಾಂಕ: 14ನೇ ಆಗಸ್ಟ್ 2014ರಲ್ಲಿ, ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಸದರಿ ಕರಡು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳ ಒಳಗಾಗಿ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸಲ್ಲಿಸುವಂತೆ ಕೋರಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವು, 21ನೇ ಆಗಸ್ಟ್ 2014ರಿಂದ ಸಾರ್ವಜನಿಕರಿಗೆ ಲಭ್ಯವಾಗುತ್ತಿರುವುದರಿಂದ;

ಮತ್ತು ಸ್ವೀಕರಿಸಲಾದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿರುವುದರಿಂದ;

ಪ್ರಸ್ತುತ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡಂತೆ 3ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:-

**ನಿಯಮಗಳು**

1. **ಹೆಸರು, ಪ್ರಾರಂಭ ಮತ್ತು ಅನ್ವಯಿಸುವಿಕೆ.-** (1) ಈ ನಿಯಮಗಳನ್ನು ಕರ್ನಾಟಕ ಶಿಕ್ಷಣ ಇಲಾಖಾ ಸೇವಾ (ಕಾಲೇಜು ಶಿಕ್ಷಣ ಇಲಾಖೆ) (ನೇಮಕಾತಿ) (ವಿಶೇಷ) ನಿಯಮಗಳು, 2014 ಎಂದು ಕರೆಯತಕ್ಕದ್ದು.

(2) ಇವು, ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

(3) ಕರ್ನಾಟಕ ಶಿಕ್ಷಣ ಇಲಾಖಾ ಸೇವಾ (ಕಾಲೇಜು ಶಿಕ್ಷಣ ಇಲಾಖೆ) (ನೇಮಕಾತಿ) ನಿಯಮಗಳು, 2008 ಅಥವಾ ಕಾಲೇಜು ಶಿಕ್ಷಣ ಇಲಾಖೆಯಲ್ಲಿನ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಭರ್ತಿ ಮಾಡುವುದಕ್ಕೆ ಸಂಬಂಧಿಸಿದ ಯಾವುದೇ ಇತರ ನಿಯಮಗಳಲ್ಲಿ ಏನೇ ಇದ್ದರೂ ಈ ನಿಯಮಗಳು, ಇವು ಪ್ರಾರಂಭವಾದ ದಿನಾಂಕದಂದು ಇರುವ ಮತ್ತು ನೇರ ನೇಮಕಾತಿ ಮೂಲಕ ಭರ್ತಿ ಮಾಡಬೇಕಿರುವ ಸದರಿ ಹುದ್ದೆಗಳ ನೇರ ನೇಮಕಾತಿಯ ಖಾಲಿ ಹುದ್ದೆಗಳಿಗೆ ಅನ್ವಯಿಸತಕ್ಕದ್ದು.

ಪರಂತು, ಈ ನಿಯಮಗಳಲ್ಲಿ ಇರುವ ಏನೇ ಸಂಗತಿಯು ಒಂದಕ್ಕಿಂತ ಹೆಚ್ಚು ಬಾರಿ ನೇಮಕಾತಿ ಮಾಡುವುದಕ್ಕೆ ಅನ್ವಯಿಸತಕ್ಕದ್ದಲ್ಲ.

2. **ಪರಿಭಾಷೆಗಳು.-** (1) ಈ ನಿಯಮಗಳಲ್ಲಿ, ಸಂದರ್ಭಕ್ಕೆ ಬೇರೆ ಅರ್ಥ ಅಗತ್ಯವಿದ್ದ ಹೊರತು,-

(ಎ) "ನೇಮಕಾತಿ ಪ್ರಾಧಿಕಾರ" ಎಂದರೆ, ಕರ್ನಾಟಕ ಸರ್ಕಾರ;

(ಬಿ) "ಸ್ಪರ್ಧಾತ್ಮಕ ಪರೀಕ್ಷೆ" ಎಂದರೆ, ಆಯ್ಕೆ ಪ್ರಾಧಿಕಾರ ಈ ನಿಯಮಗಳ ಅನುಸಾರ ನಡೆಸುವ ಪರೀಕ್ಷೆ;

(ಸಿ) "ರಾಷ್ಟ್ರೀಯ ಅರ್ಹತಾ ಪರೀಕ್ಷೆ (ರಾಅಪ)" ಎಂದರೆ, ಗೊತ್ತುಪಡಿಸಿರುವ ಏಜೆನ್ಸಿ ಅಥವಾ ವಿಶ್ವವಿದ್ಯಾಲಯ ಧನ ಸಹಾಯ ಆಯೋಗ ಅಥವಾ ಸಿಎಸ್ಐಆರ್ ನಡೆಸುವ ರಾಷ್ಟ್ರೀಯ ಅರ್ಹತಾ ಪರೀಕ್ಷೆ (ರಾಅಪ);

(ಡಿ) "ರಾಜ್ಯ ಮಟ್ಟದ ಅರ್ಹತಾ ಪರೀಕ್ಷೆ (ರಾಮಅಪ)" ಎಂದರೆ, ವಿಶ್ವವಿದ್ಯಾಲಯ ಧನ ಸಹಾಯ ಆಯೋಗಕ್ಕೆ ಅಧಿಕೃತತೆ ನೀಡಿರುವ ಮತ್ತು ವಿಶ್ವವಿದ್ಯಾಲಯ ಧನಸಹಾಯ ಆಯೋಗ ಅಥವಾ ಸಿಎಸ್ಐಆರ್ ಅಧಿಸೂಚಿಸುವಂತೆ ಗೊತ್ತುಪಡಿಸಿರುವ ಏಜೆನ್ಸಿ ನಡೆಸುವ ಪರೀಕ್ಷೆ;

(ಇ) "ಆಯ್ಕೆ" ಎಂದರೆ, ಈ ನಿಯಮಗಳ ಉಪಬಂಧಗಳಿಗನುಸಾರವಾಗಿ ಆಯ್ಕೆ ಪ್ರಾಧಿಕಾರ ಮಾಡುವ ಆಯ್ಕೆ;

(ಎಫ್) "ಆಯ್ಕೆ ಪ್ರಾಧಿಕಾರ" ಎಂದರೆ, ಕರ್ನಾಟಕ ಲೋಕಸೇವಾ ಆಯೋಗ (ಕಲೋಸೇಆ) ಅಥವಾ ರಾಜ್ಯ ಸರ್ಕಾರ ಅಧಿಸೂಚಿಸುವ ಯಾವುದೇ ಇತರ ಏಜೆನ್ಸಿ ಈ ನಿಯಮಗಳ ಉದ್ದೇಶಕ್ಕಾಗಿ ಆಯ್ಕೆ ಪ್ರಾಧಿಕಾರವಾಗುತ್ತದೆ.

(2) ಈ ನಿಯಮಗಳಲ್ಲಿ ಬಳಸಲಾದ ಆದರೆ, ಪರಿಭಾಷಿಸಿರದ ಪದಗಳು ಮತ್ತು ಪದಾವಳಿಗಳು ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರಲ್ಲಿ ಅವುಗಳಿಗೆ ಗೊತ್ತುಪಡಿಸಿರುವ ಅದೇ ಅರ್ಥಗಳನ್ನು ಹೊಂದಿರತಕ್ಕದ್ದು.

(3) **ಶೈಕ್ಷಣಿಕ ಅರ್ಹತೆ ಮತ್ತು ವಯಸ್ಸು.–** ಯಾರೇ ವ್ಯಕ್ತಿ ಈ ಮುಂದೆ ಹೇಳಿರುವ ಅರ್ಹತೆಗಳನ್ನು ಹೊಂದಿರುವ ಹೊರತು ಆತ/ ಆಕೆ, ಈ ನಿಯಮಗಳ ಮೇರೆಗೆ ನೇಮಕಾತಿಗೆ ಅರ್ಹರಾಗಿರತಕ್ಕದ್ದಲ್ಲ, ಎಂದರೆ, –

(ಎ) ಸ್ನಾತಕೋತ್ತರ ಪದವಿಯ ಸಂಬಂಧಪಟ್ಟ ವಿಷಯದಲ್ಲಿ ಕನಿಷ್ಠ ಶೇಕಡಾ 55ರಷ್ಟು ಅಂಕಗಳು ಅಥವಾ ಅದಕ್ಕೆ ತತ್ಸಮಾನವಾದ ಶ್ರೇಣಿಯನ್ನು ಪಡೆದುಕೊಂಡು ತೇರ್ಗಡೆಯಾಗಿರತಕ್ಕದ್ದು;

ಪರಂತು, ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ/ ವಿಕಲಚೇತನ (ದೈಹಿಕ ಮತ್ತು ದೃಷ್ಟಿ ವಿಕಲಚೇತನ) ಪ್ರವರ್ಗಗಳಿಗೆ ಸೇರಿರುವ ಅಭ್ಯರ್ಥಿಗಳಿಗೆ ಸ್ನಾತಕೋತ್ತರ ಪದವಿಯ ಅಂಕಗಳಲ್ಲಿ ಶೇ.5ರಷ್ಟು ವಿನಾಯಿತಿ ನೀಡಲಾಗುವುದು. ಶೇ.55ರಷ್ಟು ಅಂಕಗಳ ಅರ್ಹತಾ ಅಂಕಗಳು (ಅಥವಾ ಶ್ರೇಣಿ ನೀಡಿಕೆ ಪದ್ಧತಿಯನ್ನು ಅನುಸರಿಸುವ ಕಡೆಗಳಲ್ಲಿ ಪಾಯಿಂಟ್ ಸ್ಕೇಲ್‌ನಲ್ಲಿ ಅದಕ್ಕೆ ತತ್ಸಮಾನವಾದ ಶ್ರೇಣಿ) ಮತ್ತು ಮೇಲೆ ಹೇಳಿರುವ ಪ್ರವರ್ಗಗಳಿಗೆ ಅನುಮತಿಸಿರುವ ಶೇ.5ರಷ್ಟು ವಿನಾಯಿತಿಯ ಅಂಕಗಳನ್ನು, ಯಾವುದೇ ಕೃಪಾಂಕ ನೀಡಿಕೆ ಪ್ರಕ್ರಿಯೆಗಳನ್ನು ಒಳಗೊಳ್ಳದೆ ಕೇವಲ ಅರ್ಹತಾದಾಯಕ ಅಂಕಗಳನ್ನು ಮಾತ್ರ ಆಧರಿಸಿ ಪರಿಗಣಿಸಲಾಗುವುದು.

(ಬಿ) "ರಾಷ್ಟ್ರೀಯ ಅರ್ಹತಾ ಪರೀಕ್ಷೆ" ಅಥವಾ "ರಾಜ್ಯಮಟ್ಟದ ಅರ್ಹತಾ ಪರೀಕ್ಷೆಯಲ್ಲಿ" ತೇರ್ಗಡೆಯಾಗಿರತಕ್ಕದ್ದು. ಆದರೆ, ಸಂಬಂಧಪಟ್ಟ ವಿಷಯದಲ್ಲಿ ಕೋರ್ಸ್‌ವರ್ಕ್ ಮತ್ತು ಮೌಲ್ಯಮಾಪನ ಪ್ರಕ್ರಿಯೆ ಮೂಲಕ ಪಿಎಚ್‌ಡಿ ಪದವಿ ಗಳಿಸಿರುವ ಅಭ್ಯರ್ಥಿಗಳಿಗೆ "ರಾಷ್ಟ್ರೀಯ ಅರ್ಹತಾ ಪರೀಕ್ಷೆ" ಅಥವಾ "ರಾಜ್ಯ ಮಟ್ಟದ ಅರ್ಹತಾ ಪರೀಕ್ಷೆ"ಯಲ್ಲಿ ತೇರ್ಗಡೆಯಾಗುವುದರಿಂದ ವಿನಾಯಿತಿ ನೀಡಲಾಗಿದೆ.

ಪರಂತು, ವಿಶ್ವವಿದ್ಯಾಲಯ ಧನಸಹಾಯ ಆಯೋಗವು (ಯುಜಿಸಿ) ಕಾಲಕಾಲಕ್ಕೆ ಹೊರಡಿಸುವ ವಿನಿಯಮಗಳು/ ಮಾರ್ಗಸೂಚಿಗಳಲ್ಲಿ ನಿರ್ದಿಷ್ಟಪಡಿಸುವ ಶೈಕ್ಷಣಿಕ ಅರ್ಹತೆಗಳು ಅನ್ವಯಿಸತಕ್ಕದ್ದು.

(ಸಿ) ಆತ/ ಆಕೆಗೆ 22 ವರ್ಷಗಳಾಗಿರತಕ್ಕದ್ದು ಆದರೆ,–

(i) ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳು ಹಾಗೂ ಇತರ ಹಿಂದುಳಿದ ವರ್ಗಗಳ ಪ್ರವರ್ಗ–೧ಕ್ಕೆ ಸೇರಿರುವ ಅಭ್ಯರ್ಥಿಗಳ ಸಂದರ್ಭದಲ್ಲಿ ನಲ್ವತ್ತೈದು ವರ್ಷಗಳು;

(ii) ಇತರ ಹಿಂದುಳಿದ ವರ್ಗಗಳ II(ಎ), II(ಬಿ), III(ಎ) ಮತ್ತು III(ಬಿ) ಪ್ರವರ್ಗಗಳಿಗೆ ಸೇರಿರುವ ಅಭ್ಯರ್ಥಿಗಳ ಸಂದರ್ಭದಲ್ಲಿ ನಲ್ವತ್ಮೂರು ವರ್ಷಗಳು; ಮತ್ತು

(iii) ಯಾರೇ ಇತರ ವ್ಯಕ್ತಿಗಳ ಸಂದರ್ಭದಲ್ಲಿ ನಲ್ವತ್ತು ವರ್ಷಗಳು

– ಆಗಿರತಕ್ಕದ್ದಲ್ಲ.

ಪರಂತು, ಮೇಲೆ ನಿರ್ದಿಷ್ಟಪಡಿಸಿರುವ ಗರಿಷ್ಠ ವಯೋಮಿತಿಯನ್ನು ವಿಕಲ ಚೇತನ ಪ್ರವರ್ಗವನ್ನು ಹೊರತುಪಡಿಸಿ, ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ 6ನೇ ನಿಯಮದ (3)ನೇ ಉಪನಿಯಮದಲ್ಲಿರುವಂತೆ ವಯೋಮಿತಿಯ ಹೆಚ್ಚಳಕ್ಕೆ ಅರ್ಹತೆಯುಳ್ಳ ಪ್ರವರ್ಗಗಳಿಗೆ ಐದು ವರ್ಷಗಳಷ್ಟು ಹೆಚ್ಚಿಸತಕ್ಕದ್ದು. ವಿಕಲಚೇತನ ಪ್ರವರ್ಗದ ಸಂದರ್ಭದಲ್ಲಿ, ಮೇಲೆ ನಿರ್ದಿಷ್ಟಪಡಿಸಿರುವ ಗರಿಷ್ಠ ವಯೋಮಿತಿಯನ್ನು ಹತ್ತು ವರ್ಷಗಳಷ್ಟು ಹೆಚ್ಚಿಸತಕ್ಕದ್ದು.

4. **ಖಾಲಿ ಹುದ್ದೆಗಳನ್ನು ಅಧಿಸೂಚಿಸುವುದು.–** ನೇಮಕಾತಿ ಪ್ರಾಧಿಕಾರವು, ರಾಜ್ಯ ಸರ್ಕಾರ ಅಧಿಸೂಚಿಸುವ ಆಯ್ಕೆ ಪ್ರಾಧಿಕಾರದ ಮೂಲಕ ಆಯ್ಕೆ ಮಾಡುವುದಕ್ಕಾಗಿ ಕಾಲಕಾಲಕ್ಕೆ ಸರ್ಕಾರ ಹೊರಡಿಸುವ ನೇರ ನೇಮಕಾತಿಗೆ ಅನ್ವಯಿಸುವ ಮೀಸಲಾತಿ ನೀತಿಗನುಸಾರವಾಗಿ ಪ್ರತಿಯೊಂದು ವಿಷಯಕ್ಕೆ ಸಂಬಂಧಿಸಿದಂತೆ ಲಭ್ಯವಿರುವ ಖಾಲಿಹುದ್ದೆಗಳನ್ನು ಅಧಿಸೂಚಿಸತಕ್ಕದ್ದು. ಆನಂತರ ಆಯ್ಕೆ ಪ್ರಾಧಿಕಾರವು, ಈ ನಿಯಮಗಳಿಗನುಸಾರವಾಗಿ ಆಯ್ಕೆ ಮಾಡತಕ್ಕದ್ದು.

5. **ಅರ್ಜಿಗಳನ್ನು ಕರೆಯುವುದು** – ಆಯ್ಕೆ ಪ್ರಾಧಿಕಾರವು, ರಾಜ್ಯದಲ್ಲಿ ಹೆಚ್ಚು ಪ್ರಸಾರದಲ್ಲಿರುವ ಕನಿಷ್ಠ ಮೂರು ಕನ್ನಡ ವೃತ್ತಪತ್ರಿಕೆಗಳು ಮತ್ತು ಮೂರು ಇಂಗ್ಲಿಷ್ ವೃತ್ತಪತ್ರಿಕೆಗಳಲ್ಲಿ ವ್ಯಾಪಕ ಪ್ರಚಾರ ನೀಡುವ ಮೂಲಕ ಅರ್ಹ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸುವಂತೆ ಪ್ರಕಟಣೆ ನೀಡತಕ್ಕದ್ದು.

6. **ಆಯ್ಕೆ ವಿಧಾನ.–** ಈ ನಿಯಮಗಳ ಮೇರೆಗಿನ ನೇರ ನೇಮಕಾತಿ ವಿಧಾನವು, ಆಯ್ಕೆ ಪ್ರಾಧಿಕಾರ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸುವ ಅಂಕಗಳನ್ನು ಪರಿಗಣನೆಗೆ ತೆಗೆದುಕೊಂಡು ನಿರ್ಧರಿಸುವ ಮೆರಿಟ್ ಅನ್ನು ಆಧರಿಸಿರತಕ್ಕದ್ದು.

7. **ಸ್ಪರ್ಧಾತ್ಮಕ ಪರೀಕ್ಷೆಗಳ ರೀತಿ.–** ಎಲ್ಲಾ ಅರ್ಹ ಅಭ್ಯರ್ಥಿಗಳು, ಆಯ್ಕೆ ಪ್ರಾಧಿಕಾರ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾಗತಕ್ಕದ್ದು. ಸ್ಪರ್ಧಾತ್ಮಕ ಪರೀಕ್ಷೆಯನ್ನು ಈ ಮುಂದಿನ ರೀತಿಯಲ್ಲಿ ನಡೆಸತಕ್ಕದ್ದು, ಎಂದರೆ,–

**ಲಿಖಿತ ಪರೀಕ್ಷೆ:–**

**I. ಕಡ್ಡಾಯ ಪತ್ರಿಕೆಗಳು:–**

(1) ಪತ್ರಿಕೆ I ಕನ್ನಡ 100 ಅಂಕಗಳು

(2) ಪತ್ರಿಕೆ II ಇಂಗ್ಲಿಷ್ 100 ಅಂಕಗಳು

**II. ಐಚ್ಛಿಕ ಪತ್ರಿಕೆಗಳು**

(3) ಪತ್ರಿಕೆ III ಸಾಮಾನ್ಯ ಜ್ಞಾನ 100 ಅಂಕಗಳು (ವಸ್ತುನಿಷ್ಠ ಬಹುಆಯ್ಕೆ ಪದ್ಧತಿ)
(ಕನ್ನಡ ಅಥವಾ ಇಂಗ್ಲಿಷ್‌ನಲ್ಲಿ)

(4) ಪತ್ರಿಕೆ IV ಐಚ್ಛಿಕ ವಿಷಯ ಪತ್ರಿಕೆ 200 ಅಂಕಗಳು (ವಸ್ತುನಿಷ್ಠ ಬಹುಆಯ್ಕೆ ಪದ್ಧತಿ)

**ಟಿಪ್ಪಣಿ.–** (1) ಕಡ್ಡಾಯ ಪತ್ರಿಕೆಗಳಲ್ಲಿ ಎಂದರೆ, ಕನ್ನಡ ಮತ್ತು ಇಂಗ್ಲಿಷ್ ಪತ್ರಿಕೆಗಳಲ್ಲಿ ಗಳಿಸುವ ಅಂಕಗಳು ಅರ್ಹತಾದಾಯಕ ಸ್ವರೂಪದ್ದಾಗಿರತಕ್ಕದ್ದು. ಈ ಪತ್ರಿಕೆಗಳಲ್ಲಿ ಅರ್ಹತೆ ಪಡೆಯುವುದಕ್ಕಾಗಿ, ಪ್ರತಿಯೊಂದು ಪತ್ರಿಕೆಯಲ್ಲಿ ಕನಿಷ್ಠ ಶೇ.30ರಷ್ಟು ಮತ್ತು ಒಟ್ಟು ಶೇ. 35ರಷ್ಟು ಅಂಕಗಳನ್ನು ಪಡೆಯುವುದನ್ನು ನಿರ್ದಿಷ್ಟಪಡಿಸಲಾಗಿದೆ. ಈ 02 ಪತ್ರಿಕೆಗಳಲ್ಲಿ ಗಳಿಸುವ ಅಂಕಗಳನ್ನು ಆಯ್ಕೆಗೆ ಸಂಬಂಧಿಸಿದ ಮೆರಿಟ್ ಅನ್ನು ನಿರ್ಧರಿಸುವುದಕ್ಕಾಗಿ ಪರಿಗಣಿಸತಕ್ಕದ್ದಲ್ಲ. ಕಡ್ಡಾಯ ಪತ್ರಿಕೆಗಳ ಎಂದರೆ, ಕನ್ನಡ ಮತ್ತು ಇಂಗ್ಲಿಷ್ ಪತ್ರಿಕೆಗಳ ಗುಣಮಟ್ಟವು ಕ್ರಮವಾಗಿ, ಎಸ್.ಎಸ್.ಎಲ್.ಸಿ ಹಂತದ ಪ್ರಥಮ ಭಾಷೆ ಕನ್ನಡ ಮತ್ತು ಪ್ರಥಮ ಭಾಷೆ ಇಂಗ್ಲಿಷ್ ಮಟ್ಟದಲ್ಲಿ ಇರತಕ್ಕದ್ದು.

(2) ಪತ್ರಿಕೆ– IV ರ ಗುಣಮಟ್ಟವು ಸ್ನಾತಕೋತ್ತರ ಪದವಿ ಮಟ್ಟದಲ್ಲಿ ಇರತಕ್ಕದ್ದು.

(3) ಐಚ್ಛಿಕ ಪ್ರಶ್ನೆ ಪತ್ರಿಕೆಗಳನ್ನು ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸಿದ್ಧಪಡಿಸತಕ್ಕದ್ದು.

(4) ಪ್ರತಿಯೊಂದು ಪತ್ರಿಕೆಗೆ ಉತ್ತರಿಸುವ ಕಾಲಾವಧಿ 02 ಗಂಟೆಗಳು ಆಗಿರತಕ್ಕದ್ದು.

– ಪರಂತು, ಪತ್ರಿಕೆ IV ಕ್ಕೆ ಉತ್ತರಿಸುವ ಕಾಲಾವಧಿ 3 ಗಂಟೆಗಳು ಆಗಿರತಕ್ಕದ್ದು.

**ಪತ್ರಿಕೆ III– ಸಾಮಾನ್ಯ ಜ್ಞಾನ.–** ಈ ಪತ್ರಿಕೆಯು, ನಿರ್ದಿಷ್ಟಪಡಿಸಿರುವ ಅರ್ಹತಾದಾಯಕ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವ ವ್ಯಕ್ತಿ ತಿಳಿದುಕೊಂಡಿರುವನೆಂದು ಭಾವಿಸಬಹುದಾದ ಪ್ರಚಲಿತ ಘಟನೆಗಳು, ಸಾಮಾನ್ಯ ವಿಜ್ಞಾನ, ಮಾನವಿಕ ಶಿಸ್ತುಗಳು ಮತ್ತು ಪ್ರತಿನಿತ್ಯ ಗಮನಿಸುವ ಸಂಗತಿಗಳು ಹಾಗೂ ಪ್ರಾಯೋಗಿಕ ಜ್ಞಾನಕ್ಕೆ ಸಂಬಂಧಿಸಿದ ವಿಷಯಗಳ ಸಾಮಾನ್ಯ ಜ್ಞಾನವನ್ನು ಒಳಗೊಂಡಿರತಕ್ಕದ್ದು.

**ಪತ್ರಿಕೆ IV– ಐಚ್ಛಿಕ ಪತ್ರಿಕೆ.–** ಈ ಪತ್ರಿಕೆಯ ಪಠ್ಯಕ್ರಮವನ್ನು ಕಾಲೇಜು ಶಿಕ್ಷಣ ಇಲಾಖೆ ರಚಿಸುವ ವಿಷಯ ತಜ್ಞರ ಸಮಿತಿಯು, ಸಂಬಂಧಪಟ್ಟ ವಿಷಯದಲ್ಲಿ ಅಭ್ಯರ್ಥಿ ಹೊಂದಿರುವ ಜ್ಞಾನವನ್ನು ಅಳೆಯುವುದಕ್ಕೆ ಸಾಧ್ಯವಾಗುವ ರೀತಿಯಲ್ಲಿ ರೂಪಿಸತಕ್ಕದ್ದು.

8. **ಆಯ್ಕೆಯಾದ ಅಭ್ಯರ್ಥಿಗಳ ಪಟ್ಟಿ ಸಿದ್ಧಪಡಿಸುವುದು.–** (1) ಆಯ್ಕೆ ಪ್ರಾಧಿಕಾರವು, ಅಭ್ಯರ್ಥಿಗಳು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಮೇಲೆ ನಿರ್ಧರಿಸಿದ ಮೆರಿಟ್ ಅನ್ನು ಆಧರಿಸಿ, ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ನೇಮಕಾತಿ ಮಾಡುವುದಕ್ಕೆ ಅರ್ಹರಾಗಿರುವ ಪ್ರತಿಯೊಂದು ವಿಷಯಗಳು/ ಹುದ್ದೆಗಳಿಗೆ ಸಂಬಂಧಿಸಿದಂತೆ ಒಂದು ಅಂತಿಮ ಆಯ್ಕೆ ಪಟ್ಟಿ ಸಿದ್ಧಪಡಿಸತಕ್ಕದ್ದು ಮತ್ತು ಇಬ್ಬರು ಅಥವಾ ಹೆಚ್ಚು ಅಭ್ಯರ್ಥಿಗಳು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಒಟ್ಟು ಅಂಕಗಳ ಒಟ್ಟು ಶೇಕಡಾವಾರು ಪ್ರಮಾಣವು ಒಂದೇ ಆಗಿದ್ದ ಪಕ್ಷದಲ್ಲಿ, ಅಂಥ ಅಭ್ಯರ್ಥಿಗಳಿಗೆ ಸಂಬಂಧಿಸಿದ ಮೆರಿಟ್ ಕ್ರಮವನ್ನು ಅವರ ವಯಸ್ಸನ್ನು ಆಧರಿಸಿ ನಿಗದಿಪಡಿಸತಕ್ಕದ್ದು. ಅಂದರೆ, ವಯಸ್ಸಿನಲ್ಲಿ ದೊಡ್ಡವರಾದ ವ್ಯಕ್ತಿ ಅಥವಾ ವ್ಯಕ್ತಿಗಳನ್ನು ಮೆರಿಟ್ ಕ್ರಮದಲ್ಲಿ ಮೇಲಿನವರಾಗಿ ನಿದಿಪಡಿಸತಕ್ಕದ್ದು. ಈ ನೇಮಕಾತಿಯಲ್ಲಿ ಯಾವುದೇ ಸಂದರ್ಶನ ಇರತಕ್ಕದ್ದಲ್ಲ.

(2) ಆಯ್ಕೆ ಪ್ರಾಧಿಕಾರವು, (1)ನೇ ಉಪ–ನಿಯಮದ ಮೇರೆಗೆ ಸಿದ್ಧಪಡಿಸಿದ ಮುಖ್ಯ ಪಟ್ಟಿಯಲ್ಲಿ ಸೇರಿಲ್ಲದಿರುವ ಅಭ್ಯರ್ಥಿಗಳಿಗಾಗಿ ಒಂದು ಹೆಚ್ಚುವರಿ ಪಟ್ಟಿಯನ್ನು ಸಹ ಸಿದ್ಧಪಡಿಸತಕ್ಕದ್ದು. ಹೆಚ್ಚುವರಿ ಪಟ್ಟಿಗಳಲ್ಲಿ ಸೇರಿಸಬೇಕಿರುವ ಅಭ್ಯರ್ಥಿಗಳ ಸಂಖ್ಯೆಯು ಸಾಧ್ಯವಾದಷ್ಟುಮಟ್ಟಿಗೆ, (1)ನೇ ಉಪ–ನಿಯಮದ ಮೇರೆಗಿನ ಪಟ್ಟಿಯಲ್ಲಿರುವ ಪ್ರತಿಯೊಂದು ಮೀಸಲಾತಿ ಪ್ರವರ್ಗಗಳಲ್ಲಿನ (ಸಮತಳ ಮತ್ತು ಲಂಬ) ಅಭ್ಯರ್ಥಿಗಳ ಸಂಖ್ಯೆಯ ಶೇ. 10ರಷ್ಟು ಇರತಕ್ಕದ್ದು. ಹೆಚ್ಚುವರಿ ಪಟ್ಟಿಯಲ್ಲಿನ ಕನಿಷ್ಠ ಒಬ್ಬ ಅಭ್ಯರ್ಥಿಯು, (1)ನೇ ಉಪ–ನಿಯಮದ ಮೇರೆಗೆ ಸಿದ್ಧಪಡಿಸಿರುವ ಪಟ್ಟಿಯಲ್ಲಿ ಪ್ರತಿನಿಧಿತವಾಗಿರುವ ಪ್ರತಿಯೊಂದು ಮೀಸಲಾತಿ ಪ್ರವರ್ಗಗಳಿಗೆ (ಸಮತಳ ಮತ್ತು ಲಂಬ) ಸೇರಿದವನಾಗಿರತಕ್ಕದ್ದು. (1)ನೇ ಉಪ–ನಿಯಮದ ಮೇರೆಗೆ ಸಿದ್ಧಪಡಿಸಿರುವ ಪಟ್ಟಿಯಲ್ಲಿ ಹೆಸರು ಸೇರಿರುವ ಅಭ್ಯರ್ಥಿಯು ನಿರ್ದಿಷ್ಟಪಡಿಸಿರುವ ಕಾಲಾವಧಿಯೊಳಗೆ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವುದರಲ್ಲಿ ವಿಫಲನಾದ ಪಕ್ಷದಲ್ಲಿ,

ಆಗ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವುದರಲ್ಲಿ ವಿಫಲನಾದ ಅಭ್ಯರ್ಥಿಯ ಪ್ರವರ್ಗಕ್ಕೆ ಸೇರಿರುವ ಅಭ್ಯರ್ಥಿಯನ್ನು ಹೆಚ್ಚುವರಿ ಪಟ್ಟಿಯಿಂದ ನೇಮಕ ಮಾಡತಕ್ಕದ್ದು.

(3) (1) ಮತ್ತು (2)ನೇ ಉಪ–ನಿಯಮಗಳ ಮೇರೆಗೆ ಸಿದ್ಧಪಡಿಸಿದ ಪಟ್ಟಿಯನ್ನು ಅಧಿಕೃತ ರಾಜ್ಯಪತ್ರ ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಕಚೇರಿಯ ಸೂಚನಾಫಲಕ, ಕಾಲೇಜು ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ), ಬಹುಮಹಡಿಗಳ ಕಟ್ಟಡ, ಬೆಂಗಳೂರು ಇವುಗಳಲ್ಲಿ ಪ್ರಕಟಿಸತಕ್ಕದ್ದು ಮತ್ತು ಇವು, ಈ ನಿಯಮಗಳ ಮೇರೆಗೆ ನಿಗದಿಪಡಿಸಿರುವ ಎಲ್ಲಾ ಖಾಲಿ ಹುದ್ದೆಗಳು ಭರ್ತಿಯಾಗುವವರೆಗೆ ಅಥವಾ (2)ನೇ ಉಪ–

